# ನಿಯೋಗ ವಿಧಿಯ ವಿಚಾರ



ಧರ್ಮಂಜಿಜ್ಞಾಸಮಾನಾನಾಂ ಪ್ರಮಾಣಂ ಪ್ರಥಮಂ ಶ್ರುತಿಃ ।
ದ್ವಿತೀಯಂ ಧರ್ಮಶಾಸ್ತ್ರಂತು ತೃತೀಯಂ ಲೋಕಸಂಗ್ರಹಃ ॥
(ಮಹಾಭಾರತ)

ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ ।
ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ ।
ಉತ್ಪದ್ಯಂತೇ ಚ್ಯವಂತೇಚ ಯಾನ್ಯತೋಽನ್ಯಾನಿ ಕಾನಿಚಿತ್ ।
ತಾನ್ಯರ್ವಾಕ್ಕಾಲಿಕತಯಾ ನಿಷ್ಫಲಾನ್ಯನೃತಾನಿಚ ॥
ಯೋಽವಮನ್ಯೇತ ತೇಮೂಲೇ ಹೇತುಶಾಸ್ತ್ರಾಶ್ರಯಾದ್ದ್ವಿಜಃ ॥
ಸ ಸಾಧುಭಿ ರ್ಬಹಿಷ್ಕಾರ್ಯೋ ನಾಸ್ತಿಕೋ ವೇದನಿಂದಕಃ ॥

(ಮನುಸ್ಮೃತಿ XII. 95, 96. II. 11)

---

## ಅವತರಣಿಕೆ.

ಮೇಲೆ ಕೊಟ್ಟಿರುವ ಶ್ಲೋಕಗಳಿಂದ ಕಾಣಬರುವಂತೆ ವೇದವೇ ಸರ್ವೋತ್ಕೃಷ್ಟ ಪ್ರಮಾಣವೆಂದು ಆಸ್ತಿಕ ಶಿಖಾಮಣಿಗಳೆಲ್ಲರೂ ಒಪ್ಪಲೇ ಬೇಕಾಗಿದೆ. ವೇದದಲ್ಲಿ ಸ್ಪಷ್ಟವಾಗಿಲ್ಲದೆ ಸಂದಿಗ್ಧಗಳಾಗಿರುವ ವಿಷಯಗಳಲ್ಲಿ ಮಹರ್ಷಿಪ್ರೋಕ್ತಗಳಾಗಿಯೂ, ವೇದ ಶಾಸ್ತ್ರಕ್ಕೆ ಅವಿರುದ್ಧಗಳಾಗಿಯೂ ಇರುವು

ವುಗಳನ್ನು ದ್ವಿತೀಯ ಪ್ರಮಾಣಗಳಾಗಿಟ್ಟುಕೊಳ್ಳಬೇಕು. ವಿದ್ವಾಂಸರುಗಳು ಹೇಳುವುವುಗಳನ್ನು, ವೇದ ಶಾಸ್ತ್ರಕ್ಕೆ ಅವಿರುದ್ಧಗಳಾಗಿರುವ ಪಕ್ಷಕ್ಕೆ, ತೃತೀಯ ಪ್ರಮಾಣಗಳಾಗಿಟ್ಟುಕೊಳ್ಳಬಹುದು ವೇದ ವಿರುದ್ಧವಚನಗಳಿರುವ ಸ್ಮೃತಿಗಳೆಲ್ಲವೂ ಸತ್ಫಲದಾಯಕಗಳಲ್ಲವೆಂತಲೂ, ತಮೋನಿಷ್ಠಗಳೆಂತಲೂ ತಿಳಿದು, ವೇದಬಾಹ್ಯಗಳೆಂದು ಪರಿತ್ಯಜಿಸಬೇಕು. ಈ ಕುತರ್ಕದ ಸ್ಮೃತಿಗಳು ಹುಟ್ಟುತ್ತವೆ ಮತ್ತು ಸಾಯುತ್ತವೆ. ಈ ಸ್ಮೃತಿಗಳು ದುಃಖಕಾರಿಗಳಾಗಿಯೂ, ಅನೃತಗಳಾಗಿಯೂ ಇರುವುವು. ಹೇತುಶಾಸ್ತ್ರಾಶ್ರಯದಿಂದ ಕುತರ್ಕವನ್ನು ಮಾಡುವ ವಿದ್ವಾಂಸರುಗಳನ್ನು ನಾಸ್ತಿಕರೆಂತಲೂ, ವೇದನಿಂದಕರೆಂತಲೂ ಭಾವಿಸಿ ಸಾಧುಗಳ ಗುಂಪಿನಿಂದ ಬಹಿಷ್ಕರಿಸಬೇಕೆಂದು ಸ್ಮೃತಿಗಳೊಳಗೆಲ್ಲಾ ಉತ್ಕೃಷ್ಟವೆನಿಸಿಕೊಂಡಿರುವ ಮನುಸ್ಮೃತಿಯು ತಿಳಿಸುತ್ತದೆ.

ವಿವಾಹದ ಮುಖ್ಯತಮ ಕರ್ಮ ವಿಚಾರದಲ್ಲಿಟ್ಟುಕೊಂಡ ಪ್ರಮಾಣಗಳನ್ನೆಲ್ಲಾ ಇಲ್ಲಿಯೂ ಇಟ್ಟುಕೊಳ್ಳಬೇಕಾಗಿದೆ. ಅವು ಯಾವುವೆಂದರೆ:—

೧. "ಬ್ರಾಹ್ಮಣ್ಯರಾಜನ್ಯ ವೈಶ್ಯಾನಾಂ ಶ್ರುತೇಃ । ಸ್ತ್ರೀ ಚಾವಿಶೇಷಾತ್— ಬ್ರಾಹ್ಮಣ್ಯರಾಜನ್ಯ ವೈಶ್ಯರಿಗೆ ವೇದೋಕ್ತ ಕರ್ಮಗಳಲ್ಲಿ ಅಧಿಕಾರವುಂಟು, ಅವಿಶೇಷದ ದೆಸೆಯಿಂದ ಹೆಂಗಸರಿಗೂ ವುಂಟು" ಎಂಬ ಕಾತ್ಯಾಯನ ಶ್ರೌತ ಸೂತ್ರವೊಂದು ;

೨. "ನಾಗ್ನಿರ್ನಯಜ್ಞೋನಕ್ರಿಯಾ ನಸಂಸ್ಕಾರೋ ನ

ವ್ರತಾನಿ ಶೂದ್ರಸ್ಯ"ಪವಿತ್ರಾಗ್ನಿಯಿಲ್ಲದವನು ಶೂದ್ರ, ಪಂಚ ಮಹಾಯಜ್ಞವಿಲ್ಲದವನುಶೂದ್ರ. ಅಧ್ಯಯನವಿಲ್ಲದವನು ಶೂದ್ರ, ಬ್ರಹ್ಮೋಪದೇಶವಿಲ್ಲದವನು ಶೂದ್ರ, ಯಮ ನಿಯಮ ವ್ರತಗಳಿಲ್ಲದವನು ಶೂದ್ರ" ಎಂಬ ಪೈಂಗಿಶ್ರುತಿಯೊಂದು ;

೩. "ಅರ್ಥಾತ್ಪ್ರಕರಣಾ ಲ್ಲಿಂಗಾದೌಚಿತ್ಯಾದರ್ಥ ನಿರ್ಣಯಃ-ಶಬ್ದಾರ್ಥವನ್ನು, ಪ್ರಕರಣವನ್ನು, ಪೂರ್ವಾಪರ ಚಿಹ್ನೆಗಳನ್ನು, ಔಚಿತ್ಯವನ್ನೂ ನೋಡಿಕೊಂಡು ಅರ್ಥನಿರ್ಣಯವನ್ನು ಮಾಡಬೇಕು" ಎಂಬ ವ್ಯಾಕರಣ ನಿಯಮವೊಂದು ;

೪. "ಅನುಷ್ಠೇಯಾರ್ಥ ಸ್ಮಾರಕೋ ಮಂತ್ರಃ-ಅನುಷ್ಠಾನದ ಕ್ರಮಗಳನ್ನು ಸ್ಮರಣೆಗೆ ತರುವುದಕ್ಕೋಸ್ಕರವೇ ಮಂತ್ರಗಳವೆ" ಎಂಬ ಪೂರ್ವ ಮೀಮಾಂಸಾವಚನವೊಂದು ;

೫. "ಅವಿಧಿನಾ ಕೃತಮಕೃತಂ-ವಿಧಿಗೆ ವಿರುದ್ಧವಾಗಿ ನಡೆಯಿಸಿದ ಕರ್ಮವು ಕರ್ಮವೇ ಅಲ್ಲ" ಎಂಬ ಜೈಮಿನಿಯ ವಚನವೊಂದು.

ಈ ಬಗೆಯ ಪ್ರಮಾಣಗಳನ್ನು ಇಟ್ಟುಕೊಳ್ಳದೆಯೂ, ವೇದಮಂತ್ರಗಳನ್ನು ವಿಚಾರಮಾಡದೆಯೂ, ಸ್ತ್ರೀಯರ ಪುನರ್ವಿವಾಹವನ್ನು ಕುರಿತು ಐವತ್ತು ವರುಷಗಳಿಂದಲೂ ದಿವಾನ್ ಬಹದ್ದೂರ್ ರುಬ್ಬಗುಂಡ ರಘುನಾಥರಾಯರಾದಿಯಾಗಿ ಅನೇಕರು ಜಿಜ್ಞಾಸವನ್ನು ನಡೆಯಿಸುತ್ತಾ ಬಂದಿರುವರು. ಶ್ರುತಿ ವಿರುದ್ಧಗಳಾದ ಪರಾಶರ ಮುಂತಾದ ನವೀನ ಸ್ಮೃತಿಗಳನ್ನು ನಂಬಿಕೊಂಡು, ಗಂಡಸರಿಗೊಂದು ಧರ್ಮಶಾಸ್ತ್ರವಿರುವಂತೆಯೂ, ಹೆಂಗಸರಿಗೆ ಬೇರೊಂದು ಧರ್ಮಶಾಸ್ತ್ರವಿರುವಂತೆಯೂ

ಭಾವಿಸಿದವರಾಗಿ ನವೀನ ವಿದ್ವಾಂಸರೂ ಮಠಾಧಿಪತಿಗಳಲ್ಲಿ ಅನೇಕರೂ ಶಾಸ್ತ್ರ ನಿರ್ಣಯವನ್ನು ಮಾಡಲಾರದೆ ಪ್ರಯಾಸ ಪಡುತ್ತಿರುವರು. ಶಾಸ್ತ್ರ ಮರ್ಯಾದಾನುಸಾರವಾಗಿ ಪುನರ್ವಿವಾಹದ ವಿಷಯವನ್ನೂ, ನಿಯೋಗದ ವಿಷಯವನ್ನೂ, ಆರ್ಯಸಮಾಜದ ಮಹನೀಯರಲ್ಲದೆ ಮತ್ತಾರೂ ಚರ್ಚಿಸಿರುವಹಾಗೆ ನಮಗೆ ತೋರುವುದಿಲ್ಲ. ವಿವಾಹದ ಮುಖ್ಯತಮ ಕರ್ಮ ವಿಚಾರವೆಂಬ ನಮ್ಮ ಸಣ್ಣ ಪುಸ್ತಕದಲ್ಲಿ ವಿವಾಹ ಮಂತ್ರಗಳ ವಿಚಾರವನ್ನು ಮಾಡಿಕೊಂಡು ಬಂದು, ಪುನರ್ವಿವಾಹಕ್ಕೆ ವೇದಮಂತ್ರಗಳೇ ಇಲ್ಲವೆಂಬ ಸಂಗತಿಯನ್ನು ನಾವು ಸ್ಪಷ್ಟಪಡಿಸಿರುವುದಲ್ಲದೆ, ಲೌಕಿಕವಿವಾಹ ಅಥವಾ ನಿಯೋಗವನ್ನು ಗಂಡಸರೂ ಹೆಂಗಸರೂ ಮಾಡಿಕೊಂಡು ಸತ್ಸಂತಾನವನ್ನು ಪಡೆದು ಸುಖಸಂಯುಕ್ತರಾಗಬಹುದೆಂದು ಆಪುಸ್ತಕದ ನಿರ್ಣೀತ ವಿಷಯ ಪ್ರಕರಣದಲ್ಲಿ ಬಹುಸಂಕ್ಷೇಪವಾಗಿ ತಿಳಿಸಿರುತ್ತೇವೆ. ನಿಯೋಗ ವಿಧಿಯು ವೇದಪ್ರೋಕ್ತವಾಗಿರುವುದನ್ನೂ, ಮುಸಲ್ಮಾನರ ಹಾವಳಿಯ ಪ್ರಾರಂಭಕಾಲದವರೆಗೂ ಆಚರಣೆಯಲ್ಲಿದ್ದುದನ್ನೂ, ಮುಸಲ್ಮಾನರ ಹಾವಳಿಯಕಾಲದಲ್ಲಿ ನಿಂತುಹೋಗಿ ಸಹಗಮನ ವಿಧಿಯೂ, ವಿಧವಾವಪನ ವಿಧಿಯೂ, ಬ್ರಹ್ಮಚರ್ಯವ್ರತವೂ ಆಚರಣೆಗೆ ಬಂದುದನ್ನೂ ಈ ಸಣ್ಣ ಪುಸ್ತಕದಲ್ಲಿ ತೋರಿಸುವುದಕ್ಕೆ ಯತ್ನಿಸುತ್ತೇವೆ.

---

# I ಸ್ತ್ರೀಯರ ಸಹಗಮನದ ನಿಷೇಧ.

---

ನಿಯೋಗವಿಧಿಯನ್ನು ಆಚರಣೆಯಿಂದ ನಿವೃತ್ತಿಮಾಡಿರುವ ಕಾರಣಗಳಲ್ಲಿ ವೇದವಿರುದ್ಧವಾದ ಸಹಗಮನ ವಿಧಿಯು ಮುಖ್ಯವಾದುದಾಗಿದೆ. ಮೃತಪತಿಯೊಡನೆ ಸತಿಯು ದಹನಮಾಡಿಕೊಳ್ಳಬೇಕೆಂದು ವೇದದಲ್ಲೆಲ್ಲಿಯೂ ಹೇಳಿಲ್ಲ, ಮತ್ತು ಹಾಗೆಹೇಳುವುದು ವೇದಕ್ಕೆ ಸಾಧ್ಯವೂ ಅಲ್ಲ. ಹೀಗೆ ದೃಢವಾಗಿ ಹೇಳುವುದಕ್ಕೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುತ್ತೇವೆ. ಯಾವುವೆಂದರೆ:—

೧. ವಿವಾಹ ಕಾಲದಲ್ಲಿ ಪತ್ನಿಯು ಮಾಡುವ ಪ್ರತಿಜ್ಞೆಗಳಲ್ಲಿ ಸಹಗಮನವು ಬರುವುದಿಲ್ಲ" "ಗೃಹ್ಣಾಮಿ ತೇ ಸುಪ್ರಜಾಸ್ತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಹ-ಸಾತ್ವಿಕ ಪ್ರಜೋತ್ಪಾದನೆಗಾಗಿ ನಿನ್ನ ಕೈಯನ್ನು ನಾನು ಹಿಡಿದಿರುತ್ತೇನೆ, ನನ್ನ ದೇಹ ಗಳಿತವಾಗುವವರೆಗೂ ನಿನ್ನ ಪತ್ನಿಯಾಗಿ ನಾನಿರುವೆನು" ಎಂದು ಹೇಳುವಳೇ ಹೊರತು "ನೀನು ಸತ್ತಾಗ ನಿನ್ನ ಜತೆಯಲ್ಲಿ ನಾನೂ ದಹನಮಾಡಿಸಿಕೊಳ್ಳುವೆನು" ಎಂದು ಹೇಳುವುದಿಲ್ಲ. ವಿವಾಹದ ಮುಖ್ಯತವು ಕರ್ಮವಿಚಾರದ ಪುಸ್ತಕವನ್ನು, ನೋಡಬಹುದು.

೨. ಸಾತ್ವಿಕ ಪ್ರಜೋತ್ಪಾದನೆಯು ಪತಿಪತ್ನಿಯರ ಮುಖ್ಯ ಕರ್ತವ್ಯವಾದುದರಿಂದ 'ಸಖ್ಯಾತ್ತೇಮಾಯೋಷಗ್ಂ । ಸಖ್ಯಾ

ಸ್ಮೇ ಮಾಯೋಷ್ಟಾಃ—ನಿನ್ನನ್ನಗಲಿ ನಾನಿನ್ನಿರಲಾಗದು, ನನ್ನ ನ್ನಗಲಿ ನೀನಿನ್ನಿರಬೇಡ' ಎಂಬ ವಿವಾಹ ಮಂತ್ರದ ವಚನವು ಇಹಲೋಕಕ್ಕೆ ಸಂಬಂಧಪಟ್ಟಿದೆಯೇ ಹೊರತು ಪರಲೋಕ ವಾಸಕ್ಕೆ ಸಂಬಂಧಪಡಲಾರದು. ಇಹಲೋಕದಲ್ಲಿರುವಂತೆ ಪರಲೋಕದಲ್ಲಿ ಮದುವೆಯೂ ಇಲ್ಲ. ಮೈಥುನವೂ ಇಲ್ಲ, ಮಕ್ಕಳೂ ಇಲ್ಲ, ಏಕೆಂದರೆ ಅಲ್ಲಿ ಸ್ಥೂಲಶರೀರವೇ ಇರುವುದಿಲ್ಲ. "ಇಹೈವಸ್ತಂ ಮಾವಿಯೋಷ್ಟಂ ವಿಶ್ವಮಾಯುರ್ವ್ಯಶ್ನುತಂ । ಕ್ರೀಡಂತು ಪುತ್ರೈರ್ನಪ್ತೃಭಿ ರ್ಮೋದಮಾನಾ ಸ್ವೇಗೃಹೇ" ಎಂಬ ವೇದವಚನದಿಂದ ಪತಿಪತ್ನಿಯರಿಗೆ ಆಶೀರ್ವಾದವನ್ನು ಮಾಡುವಾಗ 'ಇಹೈವಸ್ತಂ' 'ವಿಶ್ವಮಾಯುಃ' 'ಸ್ವೇಗೃಹೇ' ಎಂಬುವು ಬರುವುವೇ ಹೊರತು ಪರಲೋಕವಾಸದ ವಿಷಯವು ಬರುವುದೇ ಇಲ್ಲ. 'ಸಖ್ಯಾಸ್ಮೇ ಮಾಯೋಷ್ಟಾಃ ನನ್ನನ್ನಗಲಿ ನೀನಿನ್ನಿರಲಾಗದು' ಎಂಬ ವೇದವಚನದ ಆಧಾರದ ಮೇಲೆ ಸ್ತ್ರೀಯರಿಗೆ ಪತಿಯ ದಹನಕಾಲದಲ್ಲಿ ಸಹಗಮನವನ್ನು ವಿಧಿಸುವುದಾದರೆ "ಸಖ್ಯಾತ್ತೇಮಾಯೋಷಗ್ಂ-ನಿನ್ನನ್ನಗಲಿ ನಾನಿನ್ನಿರಲಾಗದು" ಎಂಬ ವೇದಮಂತ್ರದ ಪೂರ್ವವಚನದ ಆಧಾರದ ಮೇಲೆ ಗಂಡನಿಗೂ ಹೆಂಡತಿಯ ದಹನ ಕಾಲದಲ್ಲಿ ಸಹಗಮನವನ್ನು ವಿಧಿಸಲೇಬೇಕು. ಇದಕ್ಕೆ ನಮ್ಮ ನವೀನ ವಿದ್ವಾಂಸರು ಒಪ್ಪುವರೆ ?

೪. ಸ್ತ್ರೀಪುರುಷರಿಬ್ಬರಿಗೂ ಋಣತ್ರಯವುಂಟು. ಪಿತೃಋಣದಿಂದ ವಿಮುಕ್ತರಾಗುವುದಕ್ಕಾಗಿ ಸ್ತ್ರೀಪುರುಷರು ವಿವಾಹವನ್ನು ಮಾಡಿಕೊಳ್ಳತಕ್ಕದು. "ಬ್ರಹ್ಮಚರ್ಯೇಣ ಋಷಿಭ್ಯೋ

ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷವಾನೃಣಃ" ಎಂದು ಯಜುರ್ವೇದವು ಸಾರುತ್ತದೆ. ಮಕ್ಕಳನ್ನು ಹುಟ್ಟಿಸಿದ ಮಾತ್ರಕ್ಕೆ ಪಿತೃಋಣದಿಂದ ವಿಮುಕ್ತರಾಗುವುದಿಲ್ಲ. ಅವರಿಗೆ ಅಧ್ಯಯನವನ್ನು ಮಾಡಿಸಿ ಜ್ಞಾನವನ್ನೂ, ಸುಶೀಲತೆಯನ್ನೂ ಉಂಟುಮಾಡಬೇಕು. ಗಂಡನು ಸಾಯುವಾಗ ಮಕ್ಕಳಾಗಿದ್ದರೆ, ಆಮಕ್ಕಳ ಪೋಷಣೆಗಾಗಿ ಇಹಲೋಕದಲ್ಲಿಯೇ ಉಳಿದಿರಬೇಕು. ಮಕ್ಕಳಾಗದಿದ್ದರೆ, ದ್ವಿತೀಯ ಪತಿಯಿಂದ ಮಕ್ಕಳನ್ನು ಪಡೆದು ಸಂತಾನವನ್ನುಳಿಸಿ, ಪಿತೃ ಋಣದಿಂದ ವಿಮುಕ್ತಳಾಗಬೇಕು. 'ಯಜದೇವಾ ನಧೀತ್ಯ ವೇದಾನ್ ಪ್ರಜಾನುತ್ಪಾದಯ' ಎಂದು ಐತರೇಯ ಬ್ರಾಹ್ಮಣವು ಆಜ್ಞಾಪಿಸುವುದು. ಸಂತಾನವು ಕ್ಷಯಿಸಿ ಹೋಗುವಂತೆ ಮಾಡುವುದು ಮಹಾಪಾಪ. ದತ್ತನಾಗಿ ಬಂದ ಪುತ್ರನಿಗಿಂತ ಹೆತ್ತಮಗನೇ ಮೇಲು.

೪. ಮೃತಪತಿಯೊಡನೆ ತಾನೂ ಸುಡಿಸಿಕೊಳ್ಳುವುದು ಪಾಪಕರವೇ ಹೊರತು ಪುಣ್ಯಕರವಲ್ಲ, ಏಕೆಂದರೆ ಈ ಕರ್ಮದಿಂದ ಆತ್ಮಹತ್ಯಾದೋಷಮಾತ್ರ ಬರುವುದು. ಪ್ರೇತಲೋಕದಲ್ಲಿಯೇ ಆಗಲಿ, ಪಿತೃಲೋಕದಲ್ಲಿಯೇ ಆಗಲಿ ಪತಿಗೆ ಇವಳಿಂದ ಶುಶ್ರೂಷೆಯು ಆವಶ್ಯಕವಾಗಿರುವುದಿಲ್ಲ; ಏಕೆಂದರೆ ಸ್ಥೂಲಶರೀರವೇ ಇರುವುದಿಲ್ಲ. ಇಹಲೋಕದಲ್ಲಿ ಮಾಡಿರುವ ಪಾಪಪುಣ್ಯಗಳಿಗನುಗುಣವಾಗಿ ಪ್ರೇತಪಿತೃಲೋಕಗಳ ಅನುಭವಗಳಿರುವುವು. "ಅಥಖಲು ಕ್ರತುಮಯಃ ಪುರುಷೋ । ಯಥಾಕ್ರತು ರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ

ಪ್ರೇತ್ಯಭವತಿ ॥" ಎಂದು ಛಾಂದೋಗ್ಯೋಪನಿಷತ್ತು ಹೇಳುತ್ತದೆ. ಅನಾಗರಿಕರಾದ ಕಾಡುಮನುಷ್ಯರಲ್ಲಿ ಗಂಡನು ಸತ್ತಾಗ ಹೆಂಡತಿಯರನ್ನು ಕೊಲ್ಲುವ ಪದ್ಧತಿ ಇರುವುದೇ ಹೊರತು ನಾಗರಿಕರಲ್ಲಿ ಎಲ್ಲೆಲ್ಲಿಯೂ ಇಲ್ಲ.

೫. ವಿವಾಹಿತ ಪತಿಗೆ ಪುಂಸ್ತ್ವ ವಿಲ್ಲದಿರುವುದರಿಂದಾಗಲಿ ಬೇರೆ ಕಾರಣದಿಂದಾಗಲಿ, ಪ್ರಜೋತ್ಪಾದನ ಕರ್ಮವು ಸಾಧ್ಯವಲ್ಲದಿದ್ದರೆ, ಅಂತಹ ಪತಿಯು ತನ್ನ ಪತ್ನಿಗೆ ದ್ವಿತೀಯ ಪತಿಯಿಂದ ಮಕ್ಕಳನ್ನು ಪಡೆಯುವುದಕ್ಕೆ ಆಜ್ಞೆಯನ್ನು ಕೊಡಬೇಕೆಂದು ವೇದವಚನವಿದೆ. 'ಅನ್ಯಮಿಚ್ಛಸ್ವ ಸುಭಗೇ ಪತಿಂ ಮತ್-ಸುಭಗೇ ಮದನ್ಯಂ ಪತಿಂ ಇಚ್ಛಸ್ವ' ಎಂದು ಋಗ್ವೇದದ ದಶಮ ಮಂಡಲದ ದಶಮಸೂಕ್ತದ ದಶಮ ಮಂತ್ರವು ತಿಳಿಸುವುದು. ಹೀಗಿರುವಲ್ಲಿ ತನ್ನ ಶವದೊಡನೆಯೇ ಜೀವವಂತಳಾದ ತನ್ನ ಪ್ರಿಯ ಪತ್ನಿಯನ್ನೂ ಸುಟ್ಟು ಬೂದಿಮಾಡಬೇಕೆಂದು ಯಾವ ಆಸ್ತಿಕ ಶಿಖಾಮಣಿತಾನೇ ಬಯಸುವನು ? ಯಾವ ವೇದಮೂರ್ತಿ ತಾನೇ ಒಪ್ಪಿ ಸ್ತ್ರೀಹತ್ಯಾ ದೋಷಕ್ಕೆ ಗುರಿಯಾಗುವನು?

೬. ನಿಯೋಗವನ್ನು ವಿಧಿಸುವ ವೇದಮಂತ್ರಗಳೆಲ್ಲಾ ಸಹಗಮನವನ್ನು ನಿಷೇಧಿಸುವವುಗಳಾಗಿರುವುವು. ಈ ಬಗೆಯ ವೇದಮಂತ್ರಗಳನೇಕವನ್ನು ಮುಂದೆ ಕೊಡುತ್ತೇವೆ. ಸಹಗಮನವನ್ನು ವಿಧಿಸುವ ವೇದ ಮಂತ್ರಗಳೇ ಇಲ್ಲದಿರುವುದರಿಂದಲೂ, ನಿಯೋಗವನ್ನು ವಿಧಿಸುವ ವೇದಮಂತ್ರಗಳನೇಕವಿರುವುದರಿಂದಲೂ, ಸಹಗಮನವು ವೇದ ವಿರುದ್ಧವೆಂಬು ಒಪ್ಪ

ಲೇ ಬೇಕಾಗಿದೆ.

ಸಹಗಮನವು ವೇದವಿರುದ್ಧವಾಗಿರುವ್ರದಲ್ಲದೆ ಪುರಾತನ ಗ್ರಂಥಗಳಿಗೆಲ್ಲಾ ವಿರುದ್ಧವಾಗಿದೆ. ಮಹಾಭಾರತವನ್ನು ಪಂಚಮವೇದವೆಂದು ಕರೆಯುತ್ತಾರೆ. ಮಹಾಭಾರತದಲ್ಲಿ ಸಹಗಮನವನ್ನು ಶ್ಲಾಘಿಸಿರುವುದೆಲ್ಲಿಯೋ ಒಂದು ಕಡೆ ಪ್ರಕ್ಷಿಪ್ತಭಾಗವಲ್ಲಿರುವುದು. ನಿಯೋಗ ವಿಧಿಯನ್ನಾದರೋ ಅನೇಕ ಸ್ಥಳಗಳಲ್ಲಿ ಹೊಗಳಿದಾರೆ. ರಾಮಾಯಣದಲ್ಲಿಯೂ ಸಹಗಮನದ ಸುದ್ದಿಯಿಲ್ಲ. ಮನುಸ್ಮೃತಿಯನ್ನು ಅತ್ಯುತ್ಕೃಷ್ಟವೆಂದು ಹೊಗಳುತ್ತಾರೆ. ಅಲ್ಲಿಯೂ ನಿಯೋಗ ಪದ್ಧತಿಯೇ ವಿಧಿಸಲ್ಪಟ್ಟಿದೆ ಈ ವಿಷಯಗಳೆಲ್ಲಾ ಮುಂದಕ್ಕೆ ಸ್ಪಷ್ಟಪಡುವುವು.

## II. ಸ್ತ್ರೀಯರ ವಪನ ಸಹಗಮನಗಳ ಸೃಷ್ಟಿ

ಹೀಗಿರುವಲ್ಲಿ ಸತಿಗೆ ಪತಿಯ ದಹನ ಕಾಲದಲ್ಲಿ ಸಹಗಮನವು ಆವಶ್ಯಕವಾದುದೆಂಬ ಭಾವವು ಹೇಗೆ ಮತ್ತು ಯಾವಾಗ ಹುಟ್ಟಿತೆಂದು ಕೇಳಬಹುದು. ಈಗಿರುವ ಶ್ಲೋಕರೂಪದ ಮನುಸ್ಮೃತಿಯನ್ನು ಕ್ರಿ. ಶ ಸುಮಾರು ನಾಲ್ಕನೆಯ ಶತಮಾನದಾಚೆಯಲ್ಲಿ ಬರೆದರೆಂಬುವನ್ನು ಸ್ತ್ರೀಸಂಸ್ಕಾರ ಪ್ರಕಾಶಿಕೆಯಲ್ಲಿ ಕಾರಣ ಸಹಿತವಾಗಿ ತಿಳಿಸಿದೇವೆ. ಮನುಸ್ಮೃತಿಯಲ್ಲಿ ಸಹಗಮನದ ಸುದ್ದಿಯೇ ಇಲ್ಲ. ವಿಗ್ರಹಾರಾಧನೆಯು ಬೌದ್ಧರಲ್ಲಿಯೂ, ಜೈನರಲ್ಲಿಯೂ ಮೊದಲು ಹುಟ್ಟಿ ಆ ಮೇಲೆ ಬ್ರಾಹ್ಮಣರಿಂದಲೂ ಸ್ವೀಕರಿಸಲ್ಪಟ್ಟಿತು ಎಂಬ ವಿಷಯವು ವಿದ್ಯಾವಂತರೆಲ್ಲರಿಗೂ ಈಗ ತಿಳಿದೇ ಇದೆ. ಬೌದ್ಧನ

ಪೂರ್ವ ಜನ್ಮಗಳ ಕಥೆಗಳು ಬೌದ್ಧ ಗ್ರಂಥಗಳಲ್ಲಿ ಪ್ರಚುರವಾದುವು; ಜೈನರ ತೀರ್ಥಂಕರರ ಚರಿತ್ರೆಗಳೂ ಅವತಾರದ ಕಥೆಗಳೂ ಬರೆಯಲ್ಪಟ್ಟುವು. ಆಗ್ರಂಥಗಳನ್ನು ನೋಡಿಕೊಂಡು ಬ್ರಾಹ್ಮಣರೂ ತಮಗೆ ಅನುಕೂಲವಾಗುವಂತೆ ಪುರಾಣಗಳನ್ನು ಬರೆದು ಮಹರ್ಷಿಗಳ ಹೆಸರನ್ನಿಟ್ಟರು- ಸ್ವರ್ಗ ವೈಕುಂಠಾದಿಲೋಕಗಳನ್ನು ಭುವನ ಭವನಗಳಂತೆ ವರ್ಣಿಸುವುದಕ್ಕೆ ಪ್ರಾರಂಭಿಸಿ, ಊರ್ಧ್ವಲೋಕಗಳಲ್ಲಿಯೂ ಸ್ಥೂಲಶರೀರವಿರುವಂತೆ ಬರೆದಿಟ್ಟರು ಭೂಲೋಕದ ಮಾನವರಂತೆ ಇಂದ್ರಾದಿಗಳೂ ಪರಸ್ತ್ರೀಗಮನ ಮುಂತಾದ ನೀಚಕೃತ್ಯಗಳಿಗೆ ಹೊರಡುವಂತೆ ವರ್ಣಿಸಿದರು. ಮುಸಲ್ಮಾನರ ಸ್ವರ್ಗದಲ್ಲಿ ಸುಂದರತಮ ಸ್ತ್ರೀಯರುಗಂಡಸರಿಗೆ ಮಾಡುವ ಶುಶ್ರೂಷೆಯೂ, ಲಾಲನೆಯೂ ಬಹಳವಾಗಿ ಬರುವುವು. ಪುರಾಣಗಳ ಕಥೆಗಳನ್ನು ಪ್ರೀತಿಯಿಂದ ಕೇಳುವ ಮುಸಲ್ಮಾನರ ದೊಡ್ಡಮನುಷ್ಯರು ಕೆಲವರು ಈಗಿನಂತೆ ಆಗಲೂ ಇದ್ದರು. ಅನೇಕ ಬ್ರಾಹ್ಮಣರು ಇಂಗ್ಲೀಷಿನ ಗ್ರಂಥಗಳನ್ನು ಈಗ ಓದುತ್ತಿರುವಂತೆ ಮುಸಲ್ಮಾನರ ಗ್ರಂಥಗಳನ್ನು ಆಗ ಚೆನ್ನಾಗಿ ಓದಿದ್ದರು. ಆ ಗ್ರಂಥಗಳ ಭಾವಗಳನ್ನು ಸಮಯೋಚಿತವಾಗಿ ಪುರಾಣಗಳಿಗೂ ಸ್ಮೃತಿಗಳಿಗೂ ಸೇರಿಸಿಕೊಂಡಂತೆ ತೋರುತ್ತದೆ. ಅಂತೂ ಇಂತೂ ಮರ್ತ್ಯ ಲೋಕದ ಸುಖದುಃಖಗಳನ್ನು ಸ್ವರ್ಗಲೋಕಕ್ಕೂ ಹೊತ್ತುಕೊಂಡು ಹೋಗಿ ಹಾಕಿದರು.

ಕ್ರಿ. ಶ. ಏಳನೆಯ ಶತಮಾನದಲ್ಲಿ ರಾಜಪುತ್ರರ ಕುಲಗಳು ಪ್ರಸಿದ್ಧಿಗೆ ಬರುವುದಕ್ಕೆ ಪ್ರಾರಂಭವಾಯಿತು. ಕ್ರಿ.ಶ.

ಒಂಬತ್ತನೆಯ ಮತ್ತು ಹತ್ತನೆಯ ಶತಮಾನಗಳಲ್ಲಿ ರಾಜಪುತ್ರರ ಮಹಾ ಸಂಸ್ಥಾನಗಳು ಪ್ರಸಿದ್ಧಿಗೆ ಬಂದುವು, ಮತ್ತು ಅವರ ಪ್ರೋತ್ಸಾಹದಿಂದ ಪೌರಾಣಿಕ ಧರ್ಮವು ಪ್ರಾಶಸ್ತ್ಯಕ್ಕೆ ಬಂತು. ರಾಜಪುತ್ರರು ಮಹಾ ಶೂರರಾಗಿದ್ದರು, ಮತ್ತು ಅವರ ಕುಲಗಳ ಸ್ತ್ರೀಯರು ಮಹಾ ರೂಪವತಿಯರಾಗಿಯೂ ಇದ್ದರು. ಹೀಗಿರುವಲ್ಲಿ ಕ್ರಿ. ಶ. ಎಂಟನೆಯ ಶತಮಾನದಲ್ಲಿ ಮುಸಲ್ಮಾನರು ಇಂಡಿಯಾ ದೇಶವನ್ನು ಪ್ರವೇಶಿಸಿ, ಕ್ರಿ. ಶ. ಒಂಬತ್ತನೆಯ ಶತಮಾನದಲ್ಲಿ ಸಿಂಧೂ ರಾಜ್ಯದಲ್ಲಿ ನೆಲೆಗೊಂಡರು. ಕ್ರಿ. ಶ. ಹತ್ತನೆಯ ಮತ್ತು ಹನ್ನೊಂದನೆಯ ಶತಮಾನಗಳಲ್ಲಿ ಅವರ ಹಾವಳಿಗಳು ಬಳೆದುವು. ರಾಜಪುತ್ರ ಕುಲಗಳ ಮಹಾ ರೂಪವತಿಯರನ್ನು ಅಪಹರಿಸಿಕೊಂಡು ಹೋಗುವುದಕ್ಕೂ ಪ್ರಾರಂಭಿಸಿದರು. ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಮುಸಲ್ಮಾನರ ರಾಜ್ಯವು ಉತ್ತರದೇಶದಲ್ಲಿ ಸ್ಥಾಪಿತವಾಗಿ ಕ್ರಿ. ಶ. ಹದಿಮೂರನೆಯ ಮತ್ತು ಹದಿನಾಲ್ಕನೆಯ ಶತಮಾನಗಳಲ್ಲಿ ಸುಮಾರಾಗಿ ಇಂಡಿಯಾ ದೇಶದಲ್ಲೆಲ್ಲಾ ಹರಡಿಕೊಂಡಿತು. ಮುಸಲ್ಮಾನರು ಇತರ ಪರದೇಶಿಯರಂತೆ ಇಂಡಿಯಾ ದೇಶಕ್ಕೆ ಬಂದಮೇಲೆ ಹಿಂದೂ ಧರ್ಮವನ್ನವಲಂಬಿಸಲಿಲ್ಲ; ಅದಕ್ಕೆ ವಿರೋಧಿಗಳಾಗಿಯೇ ಇದ್ದರು. ಅವರ ಸಂಖ್ಯೆಯು ಲಕ್ಷೋಪಲಕ್ಷಗಳಾಗುವಂತೆ ವೃದ್ಧಿಗೊಂಡಿತು. ದೇವಾಲಯಗಳನ್ನು ಗೋಮಾಂಸಾದಿಗಳಿಂದ ಕೆಡಿಸಿ, ವಿಗ್ರಹಗಳನ್ನು ಮುರಿದೊಕ್ಕಲಿಕ್ಕುತ್ತ ಬಂದರು. ಬಲಾತ್ಕಾರದಿಂದ ಹಿಂದೂ ಜನರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳುತ್ತಲೂ ಇದ್ದರು.

ಗಂಡ ಸತ್ತಿರುವ ಸುಂದರಿಯರನ್ನು ಹೊತ್ತುಕೊಂಡುಹೋಹ ಮುಸಲ್ಮಾನರಿಗೆ ಶಿಕ್ಷೆಯಾವುದೂ ಇರಲಿಲ್ಲ. ಈ ಸಂಗತಿಯನ್ನು ಬಹು ಚೆನ್ನಾಗಿ ಜ್ಞಾಪಕದಲ್ಲಿಡಬೇಕು. ಹುಡುಗಿಯರನ್ನು ಹೊತ್ತುಕೊಂಡು ಹೋಗುತ್ತಿದ್ದುದನ್ನು ಅಪಕ್ವಾವಸ್ಥಾ ವಿವಾಹ ದಿಂದ ನಿಲ್ಲಿಸಿದರು; ವಿಧವೆಯರನ್ನು ಕಾಪಾಡುವ ಬಗೆ ಯಾವು ದೂ ತೋರಲಿಲ್ಲ. ಸುಂದರತಮೆಯರಾದ ಆರ್ಯ ರಮಣಿಯರಿ ಗೆ ಕಷ್ಟಕಾಲವು ಒಳೆಯಿತು. ಈ ರಮಣಿಯರನ್ನು ಹಾ ರಿಸಿಕೊಂಡು ಹೋಗುವುದಕ್ಕಾಗಿ ಸಾವಿರಾರು ಘೋರ ಕದ ನಗಳು ನಡೆದುವು. ರಾಜಪುತ್ರರ ಚರಿತ್ರೆಯನ್ನು ಓದಿರುವವ ರಿಗೆ ಈ ವಿಷಯಗಳು ಕರತಲಾಮಲಕಗಳಾಗಿರುತ್ತವೆ. ನವೀ ನ ವಿದ್ವಾಂಸರಿಗೂ ಶ್ರೀ ಮಠಾಧಿಪತಿಗಳಲ್ಲನೇಕರಿಗೂ ತಮ್ಮ ದೇಶದ ಚರಿತ್ರೆಯು ಚೆನ್ನಾಗಿತಿಳಿಯದಿರುವುದರಿಂದ ಲೋಕಕ್ಕೆ ಬಹಳ ಕೆಡುಕಾಗುತ್ತಿದೆ. ವಿಧವೆಯರಾದ ಆರ್ಯ ರಮಣಿಯರ ನ್ನು ನಿರ್ಭಯದಿಂದ ಮುಸಲ್ಮಾನರು ಅಪಹರಿಸಿಕೊಂಡುಹೋ ಗಿ ಅವರಬಾಯಿಗೆ ಗೋಮಾಂಸವನ್ನು ತುರುಕಿ ಜಾತಿಯನ್ನು ಕೆಡಿಸುತ್ತಾಬಂದರು. ನಾನಾ ಬಗೆಯ ಅಪಮಾನಗಳನ್ನು ತಪ್ಪಿಸುವುದಕ್ಕಾಗಿ, ಅಪಜಯವಾದಾಗ, ಅಗ್ನಿಕೊಂಡಗಳಲ್ಲಿ ತಮ್ಮ ಹೆಂಗಸರನ್ನು ತಳ್ಳುವ ಪದ್ಧತಿಯನ್ನು ರಾಜಪುತ್ರವೀರರು ಪ್ರಾರಂಭಿಸಿದರು. ರಾಜಪುತ್ರ ಕುಲಗಳ ವೀರಮಾತೆಯರು ಸಂಭ್ರಮದಿಂದ ಅಗ್ನಿಕೊಂಡದೊಳಕ್ಕೆ ಧುಮುಕುತ್ತಬಂದರು. ಸಹಗಮನವು ಬಳಕೆಗೆ ಬಂದು ಗ್ರಂಥಸ್ಥವೂ ಆಯಿತು. ಸಹ ಗಮನವನ್ನು ಮಾಡದಿದ್ದ ವಿಧವೆಯರಿಗೆ ಮಾನಹಾನಿಯನ್ನು

ತಪ್ಪಿಸುವುದಕ್ಕಾಗಿ ಅವರ ತಲೆಯನ್ನು ಬೋಳಿಸಿ, ಸನ್ಯಾಸಿನಿಯರ ತೆರಕ್ಕೆ ಅವರನ್ನು ಇಳಿಯಿಸಬೇಕಾಯಿತು. ಹೀಗಾದ ಮೇಲೆ ಅವರ ನಿಯೋಗವೂ ನಿಂತುಹೋಯಿತು. ವಿಧವೆಯರ ತಲೆಯನ್ನು ಬೋಳಿಸುವುದಕ್ಕೆ ವೇದಮಂತ್ರವಾಕ್ಯದೂ ಇಲ್ಲ, ಮತ್ತು ಇರುವುದಕ್ಕೆ ಅವಕಾಶವೂ ಇಲ್ಲ; ಏಕೆಂದರೆ ಮೊದಲಲ್ಲಿಲ್ಲದ ಯಾವಅಧಿಕಾರವು ನವೀನವಾಗಿ ವಿವಾಹಸಂಸ್ಕಾರದಿಂದ ಬರುವುದೋ ಆ ಅಧಿಕಾರವಮಾತ್ರ ಪತಿಪತ್ನಿಯರ ಮರಣದಿಂದ ಹೋಗಬೇಕೇ ಹೊರತು ಸಹಜಗಳಾದ ಅಧಿಕಾರಗಳಾವುವೂ ಹೋಗುವುದಕ್ಕೆ ಕಾರಣವೇ ಇಲ್ಲ. ಔಪಾಸನಾಗ್ನಿಯೂ, ಗಾರ್ಹಪತ್ಯಾಗ್ನಿಯೂ ವಿವಾಹದಿಂದ ಲಭಿಸುವುವು; ಪತಿಪತ್ನಿಯರ ಮರಣಗಳಿಂದ ಆ ಅಗ್ನಿಗಳು ಹೋಗುವುವು.ಪತಿಸತ್ತರೆ ಪತ್ನಿಗೆ ಗೃಹ್ಯಾಗ್ನಿಯು ಹೋಗಿವಿಧವಾಗ್ನಿಯು ಬರುವುದು.ಪತ್ನಿ ಸತ್ತರೆ ಪತಿಗೆ ಗೃಹ್ಯಾಗ್ನಿಯು ಹೋಗಿ ವಿಧುರಾಗ್ನಿಯು ಬರುವುದು. ಮಕ್ಕಳನ್ನು ಹುಟ್ಟಿಸುವ ಅಧಿಕಾರವನ್ನು ಗಂಡಸಿಗೆ, ರೇತಸ್ಸನ್ನು ಧರಿಸಿ ಮಕ್ಕಳನ್ನು ಹೆರುವ ಅಧಿಕಾರವನ್ನು ಹೆಂಗಸಿಗೆ,ವಿವಾಹದಿಂದ ಹೊಸದಾಗಿ ಉಂಟಾಗುವುದಿಲ್ಲ. ಈ ಅಧಿಕಾರಗಳು ಯೌವನಾವಸ್ಥೆಗೆ ಸಹಜಗಳಾಗಿಯೇ ಇರುತ್ತವೆ. ವಿಧವೆಗೂ ವಿಧುರನಿಗೂ ವೈದಿಕವಿವಾಹಾಧಿಕಾರವಿಲ್ಲದಿದ್ದರೂ, ನಿಯೋಗಾಧಿಕಾರವು ಇದ್ದೇ ಇರಬೇಕು.ಹಾಗಿಲ್ಲದಿದ್ದರೆ ಲೋಕವು ದುರ್ಮಾರ್ಗಕ್ಕೆ ಬಿದ್ದು ಈಗಿನಂತೆ ಕೆಡುವುದು. "ವಿವಾಹದ ಮುಖ್ಯತಮಕರ್ಮ ವಿಚಾರ " ಎಂಬ ನಮ್ಮ ಇನ್ನೊಂದು ಪುಸ್ತಕದಲ್ಲಿ "ಪ್ರಕ್ಷಿಪ್ತವಚನವೊಂದರ ಜಾತಕ " ಎಂಬ

ಹೆಸರನ್ನಿಟ್ಟು ಒಂದು ಪ್ರಕರಣವನ್ನು ರಚಿಸಿರುತ್ತೇವೆ. ಮುಸಲ್ಮಾನರ ಹಾವಳಿಯ ಕಾಲದಲ್ಲಿ ಪ್ರೌಢಾವಿವಾಹವೂ, ಸ್ವಯಂವರ ವಿಧಿಯೂ, ಬ್ರಹ್ಮೋಪದೇಶವೂ ನಿಂತುಹೋಗಿ ಅಪ್ರೌಢಾವಿವಾಹವೂ ಕನ್ಯಾದಾನವಿಧಿಯೂ, ಬ್ರಹ್ಮೋಪದೇಶನಿವೃತ್ತಿಯೂ ಕೆಲವರು ನವೀನವಿದ್ವಾಂಸರುಗಳ ಅಪಾರ್ಥಗಳಿಂದ ಆಚರಣೆಗೆ ಬಂದುವು. ಆ ಕಾಲದಲ್ಲಿಯೇ ಸಹಗಮನವಿಧಿಯೂ, ವಿಧವಾವಪನವಿಧಿಯೂ ನವೀನ ವಿದ್ವಾಂಸರು ಕೆಲವರಿಂದ ವೇದವಿರುದ್ಧವಾಗಿ ಸೃಷ್ಟಿಸಲ್ಪಟ್ಟುವು. ಪ್ರಕ್ಷಿಪ್ತ ವಚನವೊಂದರ ಜಾತಕ ಎಂಬ ಪ್ರಕರಣವನ್ನು ವಾಚಕಮಹಾಶಯರು ಓದಿ, ನವೀನವಿದ್ವಾಂಸರು ಕೆಲವರು ವೈದಿಕಧರ್ಮವನ್ನು ಕೆಡಿಸಿದ ಬಗೆಯನ್ನು ಚೆನ್ನಾಗಿ ಗ್ರಹಿಸುವುದು ಉತ್ತಮವಾಗಿದೆ.

ಮೇಲೆಬರೆದಿರುವ ಅಂಶಗಳಿಗೆ ಗ್ರಂಥನಿದರ್ಶನಗಳನ್ನೂ ಕೊಡಬಹುದಾಗಿದೆ. ಕ್ರಿ. ಶ ಸುಮಾರು ನಾಲ್ಕನೆಯ ಶತಮಾನದಾದಿಯಲ್ಲಿ ರಚಿತವಾದ ಶ್ಲೋಕರೂಪದ ಮನುಸ್ಮೃತಿಯ ಕಾಲದಲ್ಲಿ ಮುಸಲ್ಮಾನರ ಹಾವಳಿಯು ಇರಲೇ ಇಲ್ಲ. ವೇದವಿರುದ್ಧವಾಗಿ ನಡೆಯಬೇಕಾದ ಆವಶ್ಯಕತೆಯೂ ಇರಲಿಲ್ಲ. ಹೀಗಿದ್ದುದರಿಂದಲೇ

ನಷ್ಟೇಮೃತೇ ಪ್ರವ್ರಜಿತೇ ಕ್ಲೀಬೇಚಪತಿತೇ ಪತೌ ।
ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥

ಪತಿಯು ದೇಶಾಂತರಗಳಿಗೆ ಹೋದವನಾಗಿ ಅವನ ಸಮಾಚಾರವೇ ಅನೇಕ ವರ್ಷಗಳವರೆಗೂ ತಿಳಿಯದಿರಬಹುದು, ಪತಿಯು ಸತ್ತುಹೋಗಬಹುದು, ಅಥವಾ ಮೈಥುನ

ಗಂಧಪುಷ್ಪಾಕ್ಷತವಾಸೋಭೂಷಣಾದಿ ಸರ್ವಭೋಗತ್ಯಾಗವನ್ನುಮಾಡಿ ಸನ್ಯಾಸಿಯಾಗಬಹುದು, ಅಥವಾ ನಪುಂಸಕನಾಗಬಹುದು-ಈ ಐದು ಆಪತ್ತುಗಳಲ್ಲಿಯೂ ಹೆಂಗಸು ನಿಯೋಗದಿಂದ ದ್ವಿತೀಯಪತಿಯನ್ನು ಹೊಂದತಕ್ಕದು ಎಂದು ಮನುಸ್ಮೃತಿಯು ತಿಳಿಸುತ್ತದೆ. ಈ ಮನುಸ್ಮೃತಿಯ ಶ್ಲೋಕದಲ್ಲಿ ವೇದವಿರುದ್ಧಭಾವವಾವುದೂ ಇಲ್ಲ; ಏಕೆಂದರೆ “ ಅನ್ಯಮಿಚ್ಛಸ್ವ ಸುಭಗೇ ಪತಿಂಮತ್—ಸುಭಗೇ ಮದನ್ಯಂಪತಿಂ ಇಚ್ಛಸ್ವ” ಎಂದು ಋಗ್ವೇದವು ವಿಧಿಸುವುದು.

ಸತು ಯದ್ಯನ್ಯ ಜಾತೀಯಃ ಪತಿತಃ ಕ್ಲೀಬಏವವಾ ।
ವಿಕರ್ಮಸ್ಥಸ್ಸಗೋತ್ರೋವಾ ದಾಸೋ ದೀರ್ಘಾಮಯೋಪಿವಾ॥
ಊಢಾಪಿದೇಯಾ ಸಾನ್ಯಸ್ಮೈ ಸಪ್ರಾವರಣ ಭೂಷಣಾ ।

ಎಂದು ಕಾತ್ಯಾಯನನು ಹೇಳುತ್ತಾನೆ

ಪೂರ್ವಕಾಲದಲ್ಲಿ ಶ್ರೀ ಶಂಕರಾಚಾರ್ಯರಂತೆ ಮಹನೀಯರು ಲೋಕಹಿತಾರ್ಥಿಗಳಾಗಿ ಬ್ರಹ್ಮಚಾರಿಗಳಾಗಿದ್ದಾಗಲೇ ಸನ್ಯಾಸಾಶ್ರಮವನ್ನು ಸ್ವೀಕರಿಸುತ್ತಿದ್ದರು. ಕಾಲಕ್ರಮದಲ್ಲಿ ಮಠಗಳು ಪ್ರಾಶಸ್ತ್ಯಕ್ಕೆ ಬಂದು ದೊಡ್ಡದೊಡ್ಡ ಜಹಗೀರುಗಳನ್ನು ಪಡೆದುವು. ಶ್ರೀಮಠಗಳ ವರಮಾನವು ಹೆಚ್ಚಿತು. ದಾರಿದ್ರ್ಯನಿವಾರಣಕ್ಕಾಗಿಯೂ ದ್ರವ್ಯಾರ್ಜನೆಗಾಗಿಯೂ ಗೃಹಸ್ಥಾಶ್ರಮಿಗಳು ಕೆಲವರು ವಿವಾಹಕಾಲದ ಪ್ರತಿಜ್ಞೆಯನ್ನುಲ್ಲಂಘಿಸಿ ಸನ್ಯಾಸವನ್ನು ಬಯಸುವುದಕ್ಕೆ ಪ್ರಾರಂಭಿಸಿದರು. ಅಂತಹವರ ಪತ್ನಿಗಳಿಗೆ ದ್ವಿತೀಯ ಪತಿಗಳನ್ನು ವಿಧಿಸುವುದು ಆ ಸನ್ಯಾಸಿಗಳ ಮಾನವು ಹೋಗುವಂತಾಯಿತು. ಇಂತಹ

ಸಂಭವಗಳಿಂದ ಈ ಶ್ಲೋಕವನ್ನು ನಿಷೇಧಿಸಬೇಕಾಯಿತು, ಪುನರ್ವಿವಾಹವನ್ನು ಮಾಡಿಕೊಂಡಿದ್ದ ಮುದುಕನು ಸತ್ತಾಗ ಅವನ ಹೆಂಡತಿಯು ದ್ವಿತೀಯ ಪತಿಯನ್ನು ವರಿಸುವುದರಿಂದ ಆ ಮುದುಕನ ಮೊದಲನೆ ಹೆಂಡತಿಯು ಮಕ್ಕಳು ನಾಚಿಕೊಳ್ಳುವಂತಾಯಿತು. ಇದಕ್ಕಾಗಿಯೂ ಆ ಶ್ಲೋಕವನ್ನು ಬಿಡಬೇಕಾಯಿತು. ನಪುಂಸಕನೆಂದು ಯಾವನು ತಾನೆ ಒಪ್ಪಿಕೊಳ್ಳುತ್ತಾನೆ? ಪತಿತನಾದವನ ಹೆಂಡತಿಯು ಬೇರೆ ಪತಿಯನ್ನು ಹೊಂದಿದರೆ ಲೋಕವು ನಗುವಂತೆಯೂ ಆಯಿತು. ಈ ಕಾರಣಗಳಿಗೋಸ್ಕರವಾಗಿಯೂ, ಈ ಶ್ಲೋಕವನ್ನು ನಿಷೇಧಿಸಬೇಕಾಯಿತು.ಮನುಸ್ಮೃತಿಯಲ್ಲಿದ್ದುದರಿಂದ ಬೇರೆ ಆಧಾರವನ್ನು ಕಲ್ಪಿಸಿಕೊಂಡಹೊರತು ಈ ಶ್ಲೋಕವನ್ನು ಬಿಡುವುದಕ್ಕಾಗಲಿಲ್ಲ.

"ಊಢಾಯಾಃ ಪುನರುದ್ವಾಹಂ ಜ್ಯೇಷ್ಠಾಂಶಂ ಗೋವಧಂ ತಥಾ।
ಕಲೌಪಂಚ ನಕುರ್ವೀತ ಭ್ರಾತೃಜಾಯಾಂ ಕಮಂಡಲುಂ ॥

ಸ್ತ್ರೀಯರ ಪುನರ್ವಿವಾಹವೂ ಜ್ಯೇಷ್ಠ ಪುತ್ರನ ಹೆಚ್ಚು ಪಾಲೂ, ಗೋವಧೆಯೂ, ಅಣ್ಣನ ಹೆಂಡತಿಯಲ್ಲಿ ಪ್ರಜೋತ್ಪಾದನೆ ಮಾಡುವುದೂ, ನಿಜವಾದ ಸನ್ಯಾಸವೂ—ಈ ಐದೂ ಕಲಿಯುಗದಲ್ಲಿ ತ್ಯಜಿಸಲ್ಪಡಬೇಕು" ಎಂದು ಆದಿತ್ಯ ಪುರಾಣದಲ್ಲಿ ಬರೆದಿಟ್ಟುಕೊಂಡು, ವೇದವು ಸನಾತನವೆಂಬ ಭಾವವನ್ನು ಮೂಲೆಗೊತ್ತರಿಸಿ, ಮನುಸ್ಮೃತಿಯ ಶ್ಲೋಕವು ಯುಗಾಂತರವನ್ನು ಕುರಿತುದು, ಕಲಿಯುಗಕ್ಕೆ ಸಂಬಂಧ ಪಡುವುದಿಲ್ಲವೆಂದು ತೀರ್ಮಾನಮಾಡಿಟ್ಟರು. ನಷ್ಟನಾದ ಪತಿ

ಯುಳ್ಳ ಹೆಂಗಸು, ಮೃತನಾದ ಪತಿಯನ್ನುಳ್ಳ ಹೆಂಗಸು, ಸನ್ಯಾಸಿಯಾದ ಪತಿಯನ್ನುಳ್ಳ ಹೆಂಗಸು, ಜಾತಿಭ್ರಷ್ಟನಾದ ಪತಿಯನ್ನುಳ್ಳ ಹೆಂಗಸು, ನಪುಂಸಕನಾದ ಪತಿಯನ್ನುಳ್ಳ ಹೆಂಗಸು- ಈ ಐದುಬಗೆಯ ಹೆಂಗಸರುಗಳಲ್ಲಿ ಹೆಚ್ಚಾಗಿದ್ದ ವಿಧವೆಯರನ್ನೇ ನಿದರ್ಶನಕ್ಕಾಗಿಟ್ಟುಕೊಂಡು,

"ಮೃತೇ ಭರ್ತರಿಯಾನಾರೀ ಬ್ರಹ್ಮಚರ್ಯೇ ವ್ಯವಸ್ಥಿತಾ । ಸಾಮೃತಾ ಲಭತೇ ಸ್ವರ್ಗಂ ಯಥಾತೇ ಬ್ರಹ್ಮಚಾರಿಣಃ ॥—

ಮೃತಪತಿಯನ್ನುಳ್ಳ ನಾರಿಯು ಮೈಥುನಕಾರ್ಯವನ್ನು ಬಿಟ್ಟು, ಬ್ರಹ್ಮಚರ್ಯದಲ್ಲಿಯೇ ಇರಬೇಕು. ಇಂತಹ ನಾರಿಗೆ ಮರಣಾನಂತರದಲ್ಲಿ ನೈಷ್ಠಿಕಬ್ರಹ್ಮಚಾರಿಗೆ ಲಭಿಸುವಂತೆ ಸ್ವರ್ಗವು ಲಭಿಸುವುದು" ಎಂಬ ಶ್ಲೋಕವನ್ನು ಕಲ್ಪಿಸಿಟ್ಟುಕೊಂಡರು. ಹೀಗೆಯೇ ವೇದವಿರುದ್ಧವಾಗಿ ಕೆಲವು ಶತಮಾನಗಳ ವರೆಗೂ ಕೆಲವು ಕಡೆಗಳಲ್ಲಿ ಆಚರಣೆಯು ನಡೆಯಿತು. ಮುಸಲ್ಮಾನರ ಹಾವಳಿಯು ಪಂಜಾಬುದೇಶದ ಪ್ರಾಂತ್ಯದಲ್ಲಿ ಹೆಚ್ಚಾಗಲು, ಸಹಗಮನಕ್ಕೆ ಶಾಸ್ತ್ರಾಧಾರವನ್ನು ಕಲ್ಪಿಸಿ ಹೆಂಗಸರನ್ನು ಚಿತಿಯೊಳಕ್ಕೆ ತಳ್ಳುವುದು ಶಾಸ್ತ್ರೀಯವೆನ್ನಬೇಕಾಯಿತು. ನವೀನವಿದ್ವಾಂಸರು ಹಿಂದೆಗೆಯಲಿಲ್ಲ. "ಆಪತ್ಕಾಲೇ ನಾಸ್ತಿಮರ್ಯಾದಾ" ಎಂಬ ಆಧಾರವನ್ನು ಇಟ್ಟುಕೊಂಡು ಸೂತ್ರಗ್ರಂಥವೊಂದರಲ್ಲಿ

ಪ್ರೇತಸ್ಯೋತ್ತರತಃ ಪತ್ನ್ಯೈ ಸಂವೇಶನ ಮವಿಶೇಷೇಣ ನಿತ್ಯವತ್ ।

ಶವದ ಚಿತಿಯ ಉತ್ತರಭಾಗದಲ್ಲಿ ಪತ್ನಿಯು ವಿಶೇಷವೇನೂ ಇಲ್ಲದಂತೆ ನಿತ್ಯದಂತೆ ಮಲಗತಕ್ಕದು ಎಂಬ ವಾಕ್ಯ

2

ವನ್ನು ಸೇರಿಸಿ ಬಿಟ್ಟರು. ಏಕಚಿತಿಯಲ್ಲಿಯೇ ದಂಪತಿಗಳ ಸ ಮಾರೋಹಣವಾಗಬೇಕೆಂದು ಹೇಳುವರಾದರು. "ಸಖ್ಯಾ ತ್ವೇವಮಾಯೋಷಗ್ಂ। ನಿನ್ನನಗಲಿ ನಾನಿನ್ನಿರಲಾಗದು" ಎಂಬ ವೇದವಚನವನ್ನು ಬಿಟ್ಟು "ಸಖ್ಯಾಸ್ತ್ವೇವಮಾಯೋಷ್ಟಾಃ! ನನ್ನ ನಗಲಿ ನೀನಿನ್ನಿರಲಾಗದು" ಎಂಬ ವೇದವಚನವನ್ನು ಮಾತ್ರ ಪ್ರೇತಲೋಕಕ್ಕೂ ಅನ್ವಯಿಸಿ, ಪತ್ನಿಯೊಡನೆ ಪತಿಗೆ ಸಹಗ ಮನವಿಲ್ಲದಂತೆ ಅನುಕೂಲಪಡಿಸಿಟ್ಟುಕೊಂಡರು. ಉಶನಋ ಷಿಯು ಬರೆದನೆಂದು ಹೆಸರಿಟ್ಟದ್ದ ಸ್ಮೃತಿಯಲ್ಲಿ

ಪೃಥಕ್ಚಿತಿಂ ಸಮಾರುಹ್ಯ ನವಿಪ್ರಾ ಗಂತುಮರ್ಹತಿ। ಅನ್ಯಾಸಾಂ ಚೈವ ನಾರೀಣಾಂ ಸ್ತ್ರೀಧರ್ಮೋಯಂ ಪರಸ್ಸ್ಮೃತಃ ॥

ಪತಿಯು ಚಿತಿಯನ್ನು ಬಿಟ್ಟು ಬೇರೆಚಿತಿಯಲ್ಲಿ ಸುಡಿಸಿ ಕೊಳ್ಳುವುದು ವಿಪ್ರಳಿಗೆ ಅರ್ಹವಲ್ಲ. ಬೇರೆಚಿತಿಯಲ್ಲಿ ಸಮಾ ರೋಹಣಮಾಡುವುದು ವಿಪ್ರೇತರ ಸ್ತ್ರೀಧರ್ಮವೆಂದು ತಿಳಿ ಯತಕ್ಕದು ಎಂಬುದನ್ನು ಸೇರಿಸಿದರು. ರಾಜಪುತ್ರರ ಸಂ ಸ್ಥಾನಗಳಲ್ಲಿ ಮುಸಲ್ಮಾನರ ಹಾವಳಿಯಿಂದ ಸಹಗಮನವು ದ್ವಿಜಸ್ತ್ರೀಯರಿಗೆ ಬಳಕೆಯಾಗುತ್ತಿರುವಲ್ಲಿ ಮುಸಲ್ಮಾನರ ಹಾವಳಿಯಿಲ್ಲದ ಇತರ ದೇಶಗಳಲ್ಲಿ ಈ ಸಹಗಮನದ ಸುದ್ದಿ ಯನ್ನು ಕೇಳಿ, ಬ್ರಾಹ್ಮಣರು ಅದನ್ನು ಅಶಾಸ್ತ್ರೀಯವೆಂದು ದೂಷಿಸಿ, ಬ್ರಾಹ್ಮಣಸ್ತ್ರೀಯರು ಸಹಗಮನವನ್ನು ಮಾಡಕೂ ಡದೆಂದು ತೀರ್ಮಾನಿಸಿದರು.

ನಮ್ರಿಯೇತ ಸಮಂ ಭರ್ತ್ರಾ ಬ್ರಾಹ್ಮಣೀ ಶೋಕಮೋಹಿತಾ ।
ಪ್ರವ್ರಜ್ಯಾಗತಿ ಮಾಪ್ನೋತಿ ಮರಣಾದಾತ್ಮಘಾತಿನೀ ॥

ಶೋಕವೋಹಿತಳಾಗಿ ಬ್ರಾಹ್ಮಣಸ್ತ್ರೀಯು ಗಂಡನೊಡನೆ ಸಹಗಮನವನ್ನು ಮಾಡಕೂಡದು. ಹಾಗೆ ಮಾಡುವಳಾದರೆ ಆತ್ಮಘಾತಿನಿಯಾಗಿ ಪ್ರವ್ರಜ್ಯಾಜನ್ಮವನ್ನು ಹೊಂದುವಳು ಎಂದು ವ್ಯಾಘ್ರಪಾದಸ್ಮೃತಿಯಲ್ಲಿಯೂ,

ಯಾಸ್ತ್ರೀಬ್ರಾಹ್ಮಣಜಾತೀಯಾ ಮೃತಂ ಪತಿ ಮನುವ್ರಜೇತ್ ॥
ಸಾಸ್ವರ್ಗ ಮಾತ್ಮಘಾತೇನ ನಾತ್ಮಾನಂ ನಪತಿಂ ನಯೇತ್ ॥

ಎಂದು ಅಂಗಿರಸ್ಮೃತಿಯಲ್ಲಿಯೂ

''ಮೃತಾನು ಗಮನಂ ನಾಸ್ತಿ ಬ್ರಾಹ್ಮಣ್ಯಾ ಬ್ರಹ್ಮಶಾಸನಾತ್ । ಇತರೇಷಾಂತು ವರ್ಣಾನಾಂ ಸ್ತ್ರೀಧರ್ಮೋಯಂ ಪರಸ್ಮೃತಃ ॥ ಉಪಕಾರಂ ಯಥಾಭರ್ತುರ್ಜೀವಂತೀ ನತಥಾಮೃತಾ।ಕರೋತಿ ಬ್ರಾಹ್ಮಣೀ ಶ್ರೇಯೋ ಭರ್ತುಃ ಶೋಕ ಕರೀಚಿರಾತ್ ॥ ಅನುವರ್ತೇತ ಜೀವಂತಂ ನಾನುಯಾಯಾನ್ಮೃತಂಪತಿಂ । ಜೀವ್ಯಭರ್ತುರ್ಹಿತಂ ಕುರ್ಯಾನ್ಮರಣಾದಾತ್ಮಘಾತಿನೀ ॥

ವೇದಶಾಸನವು ಕೂಡದೆಂದಿರುವುದರಿಂದ ಮೃತಾನುಗಮನವು ಬ್ರಾಹ್ಮಣಸ್ತ್ರೀಯರಿಗೆ ಕೂಡದು ಇತರವರ್ಣದ ಸ್ತ್ರಿಯರಿಗೆ ಧರ್ಮವೆಂದು ಬೇರೆಕಡೆಯಲ್ಲಿ ಹೇಳಿದೆ. ಬದುಕಿರುವಾಗ ಭರ್ತುವಿಗೆ ಉಪಕಾರಮಾಡುವಂತೆ ಅವನು ಸತ್ತಮೇಲೆಯೂ ಮಾಡುತ್ತೇನೆಂದು ಹೋಗಕೂಡದು.ತಾನು ಬದುಕಿರುವವರೆಗೂ ಭರ್ತುವಿಗಾಗಿ ಶೋಕಪಡುತ್ತಿರುವುದು ಬ್ರಾಹ್ಮಣಸ್ತ್ರೀಗೆ ಶ್ರೇಯಸ್ಕರ.ಪತಿಯನ್ನು ಜೀವವಂತನಾಗಿರುವವರೆಗೂ ಅನುವರ್ತಿಸತಕ್ಕದು. ಬದುಕಿರುವ ವರೆಗೂ ಭರ್ತುವಿಗೆ ಹಿತಕಾರಿಯಾಗಿರಬೇಕು. ಆತನು ಸತ್ತಾಗ ತಾನು ಸಹ

ಗಮನದಿಂದ ಆತ್ಮಹತ್ಯವನ್ನು ಮಾಡಿಕೊಳ್ಳಕೂಡದು'' ಎಂದು ಪೈಠೀನಸೀಸ್ಮೃತಿಯಲ್ಲಿ ನವೀನವಿದ್ವಾಂಸರು ಬರೆದರು. ಸನ್ಯಾಸಿಗಳಾದ ಪತಿಯನ್ನುಳ್ಳ ಬ್ರಾಹ್ಮಣಸ್ತ್ರೀಯರು ಮೃತಪತಿಯುನ್ನುಳ್ಳ ಸ್ತ್ರೀಯರ ಜತೆಗೇ ಶಾಸ್ತ್ರತಃ ಸೇರುವುದರಿಂದ ಇವರಿಗೂ ಉಪಕಾರಮಾಡಿದಂತಾಯಿತು. ಗೃಹಸ್ಥಾಶ್ರಮದಿಂದ ಸನ್ಯಾಸವನ್ನು ಸ್ವೀಕರಿಸಿದ ಮಠಾಧಿಪತಿಗಳು ಕೆಲವರ ಭಾರ್ಯೆಯರು ಉತ್ತಮಾಭರಣಭೂಷಿತೆಯರಾಗಿ ದೇವರ ದರ್ಶನಕ್ಕೆ ಶ್ರೀ ಮಠಗಳಿಗೆ ಈಗಿನಂತೆ ಆಗಲೂ ಬರುತ್ತಿದ್ದದರಿಂದ ಮೇಲಣ ಶ್ಲೋಕಗಳು ಅವರಿಗೂ ಪ್ರಯೋಜನಕಾರಿಗಳಾಗಿಯೇ ಇದ್ದುವೆಂದು ಹೇಳಬೇಕಾಗಿದೆ. ಆದರೆ ಕ್ರಿ. ಶ ಹನ್ನೆರಡನೆಯ ಮತ್ತು ಹದಿನಾಲ್ಕನೆಯ ಶತಮಾನಗಳಲ್ಲಿ ಮುಸಲ್ಮಾನರು ಸುಮಾರಾಗಿ ಇಂಡಿಯಾದೇಶವನ್ನೆಲ್ಲಾ ಆಕ್ರಮಿಸಿಕೊಂಡು ವಿಧವೆಯರನ್ನು ಹಾರಿಸಿಕೊಂಡು ಹೋಗುತ್ತಿದ್ದಾಗ ನವೀನ ವಿದ್ವಾಂಸರುಗಳ ಸ್ಮೃತಿಗಳ ರಾಗವು ಬದಲಾಯಿಸಿತು. ತಾವು ನಿಷೇಧಿಸುತ್ತಿದ್ದ ಸಹಗಮನವನ್ನೇ ಶ್ಲಾಘಿಸುವುದಕ್ಕೆ ಪ್ರಾರಂಭಿಸಿದರು.

" ತಿಸ್ರಃ ಕೋಟ್ಯರ್ಧಕೋಟೀಚ ಯಾನಿ ಲೋಮಾನಿ ಮಾನುಷೇ।। ತಾವತ್ಕಾಲಂ ವಸೇತ್ಸ್ವರ್ಗೆ ಭರ್ತಾರಂ ಯಾನುಗಚ್ಛತಿ ।।

ಮನುಷ್ಯಶರೀರದಲ್ಲಿ ಮೂರುವರೆಕೋಟಿ ಕೂದಲುಗಳಿವೆಯಷ್ಟೆ. ಭರ್ತಾರನೊಡನೆ ಸಹಗಮನಮಾಡುವ ಪತ್ನಿಯು ಅಷ್ಟು ಕಾಲದವರೆಗೂ ಸ್ವರ್ಗಸುಖಗಳನ್ನು ಅನುಭೋಗಿಸುತ್ತಾ, ಸ್ವರ್ಗದಲ್ಲಿರುವಳಾಗುತ್ತಾಳೆ'' ಎಂಬ ಶ್ಲೋ

ಕವು ಪರಾಶರಸ್ಮೃತಿಗೆ ಸೇರಿತು ‚‚ಕಲೌಪಾರಾಶರಸ್ಮೃತಃ"
ಎಂದು ವಾಡಿಕೆಯಾಗಿದ್ದುದರಿಂದ ಹಾರೀತಸ್ಮೃತಿಯಲ್ಲಿ

"ಮೃತೇ ಭರ್ತರಿ ಯಾನಾರೀ ಧರ್ಮಶೀಲಾ ದೃಢವ್ರತಾ।ಅನುಗಚ್ಛತಿ ಭರ್ತಾರಂ ಶೃಣು ತಸ್ಯಾಸ್ತಿ ಯತ್ಫಲಂ॥ತಿಸ್ರ ಕೋಟ್ಯರ್ಧಕೋಟೀ ಚ ಯಾನಿ ಲೋಮಾನಿ ಮಾನುಷೇ । ತಾವಂತ್ಯಬ್ದ ಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ॥ ಮಾತೃಕಂ ಪೈತೃಕಂ ಚೈವಯತ್ರ ಕನ್ಯಾ ಪ್ರದೀಯತೇ। ಕುಲತ್ರಯಂಪುನಾತ್ಯೇಷಾ ಭರ್ತಾರಂ ಯಾನುಗಚ್ಛತಿ ॥"

ಎಂಬ ಶ್ಲೋಕಗಳು ಸೇರಿದುವು. ಸಹಗಮನದಿಂದ ಮೂರೂವರೆಕೋಟಿ ಸಹಸ್ರವರ್ಷಗಳ ಸ್ವರ್ಗಲೋಕವಾಸವೂ, ಕುಲತ್ರಯಗಳ ಪಾವನವೂ ಆಗುವುವೆಂದು ಬರೆದಿಟ್ಟರು ಸಹಗಮನವನ್ನು ನಿಷೇಧಿಸಿದ್ದ ಆಂಗಿರಸ್ಮೃತಿಯೂ,

"ಮೃತೇ ಭರ್ತರಿ ಯಾನಾರೀ ಸಮಾರೋಹೇ ದ್ಧುತಾಶನಂ। ಸಾರುಂಧತೀ ಸಮಾಚಾರಾ ಸ್ವರ್ಗಲೋಕೇ ಮಹೀಯತೇ ॥

ಎಂದು ಸಹಗಮನವನ್ನು ಶ್ಲಾಘಿಸಿತು. ಕೆಟ್ಟಹೆಂಗಸರು ಸಹಗಮನದಿಂದ ಸ್ವರ್ಗಸುಖವನ್ನು ಅನುಭವಿಸುವವರಾಗುತ್ತಾರೆಂದು ಹೇಳುವುದೂ ಉಚಿತವೆಂದು ತೋರಿತು. ಈ ಭಾವವನ್ನು ಪಂಚಮವೇದವೆನಿಸಿಕೊಂಡಿದ್ದ ಮಹಾಭಾರತಕ್ಕೆ ಸೇರಿಸಿದರು.

" ಅವಮನ್ಯಚಯಾಃ ಪೂರ್ವಂಪತಿಂ ದುಷ್ಟೇನ ಚೇತಸಾ।ವರ್ತಂತೇಯಾಶ್ಚ ಸತತಂ ಭರ್ತೃಣಾಂ ಪ್ರತಿಕೂಲತಃ॥ ಭರ್ತ್ರಾನುಮರಣಂ ಕಾಲೇ ಯಾಃಕುರ್ವಂತಿ ತಥಾವಿಧಾಃ। ಕಾಮ ನ್ಮಾತ್ಕ್ರೋಧಾದ್ಭಯಾನ್ಮೋಹಾ ತ್ಸರ್ವಾಃ ಪೂತಾ ಭವಂತ್ಯುತ॥

ಭರ್ತನಿಗೆ ಪ್ರತಿಕೂಲೆಯಾಗಿ ತನ್ನ ದುಷ್ಟವರ್ತನದಿಂ

ದ ಆತನಿಗೆ ಅಪಮಾನವನ್ನುಂಟುಮಾಡುತ್ತಿದ್ದ ಪತ್ನಿಯೂ ಕೂಡ ಪತಿಯೊಡನೆ ಸಹಗಮನವನ್ನು ಮಾಡಿದರೆ ಕಾಮದಿಂದಲೂ, ಕ್ರೋಧದಿಂದಲೂ, ಭಯದಿಂದಲೂ, ಮೋಹದಿಂದಲೂ ಸಂಪೂರ್ಣವಾಗಿ ವಿಮುಕ್ತಳಾಗುವಳು' ಎಂಬ ಶ್ಲೋಕಗಳನ್ನು ಸೇರಿಸಿದರು. ಇಷ್ಟು ಮಾಡಿದರೂ ತೃಪ್ತಿಯಾಗಲಿಲ್ಲ. ನರಕದಲ್ಲಿ ಬಿದ್ದಿರುವ ಗಂಡನನ್ನೂ ಸಹಗಮನದಿಂದ ಪತ್ನಿಯು ಸ್ವರ್ಗಕ್ಕೆಳೆದುಕೊಳ್ಳುವಳು ಎಂಬ ಭಾವವನ್ನು ಸೇರಿಸುವುದು ಉಚಿತವೆಂದು ತೋರಿತು. ಅದನ್ನೂ ಮಾಡಿದರು.

" ವ್ಯಾಳಗ್ರಾಹೀ ಯಥಾವ್ಯಾಳಂ ಬಲಾದುದ್ಧರತೇ ಬಿಲಾತ್ ।
ಏವಂಸ್ತ್ರೀ ಪತಿಮುದ್ಧೃತ್ಯತೇನೈವ ಸಹ ಮೋದತೇ ॥

ಹಾವು ಹಿಡಿಯುವವನು ಹಾವನ್ನು ಬಿಲದಿಂದ ಬಲವಾಗಿ ಮೇಲಕ್ಕೆ ಹೇಗೆಳೆಯುವನೋ, ಹಾಗೆಯೇ ಸಹಗಮನವನ್ನು ಮಾಡುವ ಪತ್ನಿಯು ನರಕದಲ್ಲಿ ಬಿದ್ದಿರುವ ತನ್ನ ಪತಿಯನ್ನು ಸ್ವರ್ಗಕ್ಕೆಳೆದುಕೊಂಡು ಅವನೊಡನೆ ಸುಖಿಸುವಳು " ಎಂಬ ಶ್ಲೋಕವು ಪರಾಶರಸ್ಮೃತಿಯ ನಾಲ್ಕನೆಯ ಅಧ್ಯಾಯದಲ್ಲಿ ಮೂವತ್ತೊಂದನೆಯದಾಗಿರುತ್ತದೆ ಮಹಾಮಹಾಪಾತಕಗಳನ್ನು ಮಾಡಿ ಘೋರವಾದ ನರಕದಲ್ಲಿ ಬಿದ್ದಿರುವ ಪತಿಯೂ ಪತ್ನಿಯ ಸಹಗಮನದಿಂದ ಸ್ವರ್ಗಸ್ಥನಾಗಿ ಇಂದ್ರಭೋಗಗಳನ್ನೆಲ್ಲಾ ಅನುಭವಿಸುವನು ಎಂಬ ಮಾತೊಂದು ಉಳಿದಿತ್ತು. ವೇದವ್ಯಾಸರ ಹೆಸರನ್ನಿಟ್ಟಿರುವ ನವೀನಸ್ಮೃತಿಯು ಈ ಮಾತನ್ನೂ ಆಡಿಬಿಟ್ಟದೆ. ಹೇಗೆಂದರೆ—

ಯದಿಪ್ರವಿಷ್ಟೋನರಕಂ ಬದ್ಧಃ ಪಾಶೈಸ್ಸುದಾರುಣೈಃ। ಸಂಪ್ರಾಪ್ತೋ ಯಾತನಾಸ್ಥಾನಂ ಗೃಹೀತೋಯಮಕಿಂಕರೈಃ । ತಿಷ್ಠತೇ ವಿವಶೋದೀನೋ ವೇಷ್ಟಮಾನಸ್ಸ್ವಕರ್ಮಭಿಃ। ವ್ಯಾಳಗ್ರಾಹೀ ಯಥಾವ್ಯಾಳಂ ಬಿಲಾದ್ಗೃಹ್ಣಾತ್ಯಶಂಕಿತಃ। ತದ್ವದ್ಭರ್ತಾರಮಾದಾಯ ದಿವಂಯಾತಿಚ ಸಾಬಲಾತ್ । ಯಾಚಕಭರ್ತಪರಾನಿತ್ಯಂ ಸ್ತೂಯಮಾನಾ ಪ್ಸರೋಗಣೈಃ ॥ ಕ್ರೀಡತೇಪತಿನಾಸಾರ್ಧಂ ಯಾವದಿಂದ್ರಾಶ್ಚತುರ್ದಶ । ಬ್ರಹ್ಮಘ್ನೋವಾ ಕೃತಘ್ನೋವಾಮಿತ್ರಘ್ನೋವಾ ಭವೇತ್ಪತಿಃ॥ ಪುನಾತ್ಯವಿಧವಾನಾರೀ ತಮಾದಾಯಮೃತಾತುಯಾ ''

ಹೀಗೆ ನವೀನ ವಿದ್ವಾಂಸರು ಧೈರ್ಯದಿಂದ ವೇದವನ್ನು ಮೂಲೆಗೊತ್ತರಿಸಿ ಎಷ್ಟೆಷ್ಟೋ ಪ್ರಯತ್ನದಿಂದ ಸ್ಥಾಪಿಸಿದ ಸಹಗಮನದ ವಿಧಿಯು ಬ್ರಿಟಿಷ್ ಪ್ರಭುಗಳ ಕಾನೂನಿನಿಂದ ಪರಲೋಕಯಾತ್ರೆಯನ್ನು ಮಾಡಿ ಈಗ ಸುಮಾರು ೮೦ ವರುಷಗಳಾಗಿವೆ.

ಸಹಗಮನವನ್ನು ಆಚರಿಸದೆ ಬಿಟ್ಟ ವಿಧವೆಯರಿಗೆ ಏನುಮಾಡಬೇಕೆಂಬ ಜಿಜ್ಞಾಸವು ಹುಟ್ಟಿತು ವಿಧವೆಯರನ್ನು ಕೊತ್ತುಕೊಂಡು ಹೋದ ಮುಸಲ್ಮಾನರಮೇಲೆ ಪಿರ್ಯಾದನ್ನೂ ಹಿಡಿಯುತ್ತಿರಲಿಲ್ಲ. ಅವರು ತಲೆಯನ್ನು ಬೋಳಿಸಿಕೊಂಡು ಪ್ರವ್ರಜೆಯರಾಗಬೇಕೆಂದು ವಿಧಿಸಿದರು, ಆದರೆ ಕ್ಷತ್ರಿಯ ಸ್ತ್ರೀಯರು ಇದಕ್ಕೊಪ್ಪದಿದ್ದುದರಿಂದ ಸ್ಪಷ್ಟವಾಗಿ ಶ್ಲೋಕವನ್ನು ಬರೆಯುವುದು ಕಷ್ಟವಾಯಿತು. ಮೊದಲಿದ್ದೊಂದು ಶ್ಲೋಕವನ್ನು ಉಪಯೋಗಿಸಿಕೊಂಡು ವ್ಯಾಖ್ಯಾನದ ಮೂಲಕ ವಿಧವಾವಪನವಿಧಿಯನ್ನು ತೋರಿಸಿರುವರು. ಆ ಶ್ಲೋಕವಾವುದೆಂದರೆ—

"ಸರ್ವಾನ್ ಕೇಶಾನ್ ಸಮುದ್ಧೃತ್ಯ ಚ್ಛೇದಯೇ ದಂಗುಲದ್ವಯಂ । ಏವಂ ನಾರೀಕುಮಾರೀಣಾಂ ಶಿರಸೋಮುಂಡನಂಸ್ಮೃತಂ ॥ ವ್ಯಾಖ್ಯಾನ॥ ನಾತ್ರನಾರೀಶಬ್ದಃ ಸ್ತ್ರೀಮಾತ್ರವಾಚೀ । ಕಿಂತು ಸಭರ್ತೃಕ ಸ್ತ್ರೀವಾಚೀ । ಕುಮಾರ್ಯಸ್ತು ವಿವಾಹರಹಿತಾಃ। ತಥಾಚಸಭರ್ತೃಕಾಣಾಂವಿವಾಹ ರಹಿತಾನಾಂ ಚೈತದುಕ್ತಂ ಭವತಿ । ತತೋವಿಧವಾನಾಂ ಸರ್ವಾತ್ಮನಾ ಮೌಂಡ್ಯಮಂಗೀಕೃತಂ ಭವತಿ॥"

ಎಂದು ಮುಸಲ್ಮಾನರ ಹಾವಳಿಯ ಕಾಲದಲ್ಲಿ ಹುಟ್ಟಿದ ಪರಾಶರಮಾಧವೀಯದಲ್ಲಿ ಹೇಳಿದೆ. ಈ ಪರಾಶರಸ್ಮೃತಿಯ ಹಿಂದಿನ ಸ್ಮೃತಿಗಳಲ್ಲಿ ವಿಧವಾವಪನ ವಿಷಯವು ಇಲ್ಲದಿರುವುದರಿಂದ ಈ ವಿಧಿಯು ಮುಸಲ್ಮಾನರ ಹಾವಳಿಯಕಾಲದಲ್ಲಿಯೇ ಹುಟ್ಟಿತೆಂಬುದು ಸ್ಪಷ್ಟ. ಈ ವಿಧವಾವಪನವು ಶ್ರುತಿವಿರುದ್ಧವೆಂಬುದನ್ನು ಮುಂದೆ ಸ್ಪಷ್ಟಪಡಿಸುತ್ತೇವೆ.

41. ಆದರೆ ವಿಧವೆಯರ ಮೌಂಡ್ಯವು ಸರ್ವಾತ್ಮನಾ ಅಂಗೀಕರಿಸಲ್ಪಡಬೇಕಾದರೆ ಆ ಅರ್ಥಕ್ಕೆ ಪರಾಶರಸ್ಮೃತಿಯಲ್ಲಿ ಶ್ಲೋಕವನ್ನೇಕೆ ಬರೆಯದೆ ಬಿಟ್ಟರೆಂಬುದನ್ನು ವಿಚಾರ ಮಾಡಬೇಕಾಗಿದೆ.

"ಸರ್ವಾನ್ ಕೇಶಾನ್ ಸಮುದ್ಧೃತ್ಯ ಚ್ಛೇದಯೇದಂಗುಲದ್ವಯಂ । ಏವಂನಾರೀಕುಮಾರೀಣಾಂ ಶಿರಸೋಮುಂಡನಂಸ್ಮೃತಂ ॥

ತಲೆಯ ಕೂದಲನ್ನೆಲ್ಲಾ ಜೋಡಿಸಿ ಮೇಲಕ್ಕೆತ್ತಿ ಹಿಡಿದುಕೊಂಡು ಕೊನೆಯಲ್ಲಿ ಎರಡಂಗುಲದಷ್ಟನ್ನು ಛೇದಿಸಿರಿ ಇದೇ ನಾರಿಯರ ಮತ್ತು ಕುಮಾರಿಯರ ಶಿರೋಮುಂಡನವೆಂದು ತಿಳಿಯತಕ್ಕದು" ಎಂಬ ಶ್ಲೋಕದಲ್ಲಿ ಯಾವಾಗ ಮತ್ತು ಯಾರು ಯಾರಿಗೆ ಈ ಕರ್ಮವನ್ನು ನಡೆಯಿಸಬೇ

ಕ್ಕೋ ತಿಳಿಸಲಿಲ್ಲ. ಶಿರೋಮುಂಡನ ಕರ್ಮದ ಸಂದರ್ಭಗಳನ್ನು ವಿಚಾರಮಾಡಿ ನೋಡೋಣ.

ಕುಮಾರಿಯರ ವಿಷಯವನ್ನು ಮೊದಲುನೋಡೋಣ. ಕುಮಾರಿ ಎಂದರೆ ಮದುವೆಇಲ್ಲದ ಹುಡುಗಿಯೆಂದು ವ್ಯಾಖ್ಯಾನಮಾಡಿರುತ್ತಾರೆ, ಮದುವೆಯನ್ನು ಹತ್ತುವರುಷದಮೇಲೆ ಮಾಡಕೂಡದೆಂದು ಪರಾಶರಸ್ಮೃತಿಯು ವಿಧಿಸುವುದರಿಂದ ಹತ್ತನೆಯ ವರ್ಷಕ್ಕೆ ಮುಂಚೆಯೇ ನಡೆಯುವ ಕರ್ಮಕ್ಕೆ ಇದು ಸಮನ್ವಯವಾಗಬೇಕು. ಆ ಕರ್ಮವು ಚೌಲಕರ್ಮವಲ್ಲದೆ ಮತ್ತಾವುದೂ ಆಗಲಾರದು. ಏಕೆಂದರೆ ಪರಾಶರಸ್ಮೃತಿಯು ಹೆಂಗಸರಿಗೆ ವಿವಾಹವೇ ಬ್ರಹ್ಮೋಪದೇಶದ ಪ್ರತಿನಿಧಿಯೆಂದು ಭಾವಿಸುತ್ತದೆ. ಚೌಲಕರ್ಮವಾದರೆ "ಸರ್ವಾನ್ ಕೇಶಾನ್ ಸಮುದ್ಧೃತ್ಯ" ಎಂಬುದು ಸಮನ್ವಯವಾಗುವುದಿಲ್ಲ. ಹೀಗಿರುವುದರಿಂದ ಕುಮಾರಿ ಎಂಬ ಶಬ್ದಕ್ಕೆ ಮದುವೆಯಿಲ್ಲದವಳೆಂಬ ಅರ್ಥವನ್ನು ಬಿಟ್ಟು, ಮೈನೆರೆಯದ ಹೆಂಡತಿಯೆಂದು ಅರ್ಥಮಾಡಬೇಕಾಗಿದೆ; ನಾರಿಯೆಂದರೆ ಮೈನೆರೆದಿರುವ ಹೆಂಡತಿ.

ಸಭರ್ತೃಕ ಸ್ತ್ರೀಯರಿಗೆ ಶಿರೋಮುಂಡನದ ಸಂಭವಗಳು ಎರಡೇಯಿರಡಿರುವುವು. ಯಾಗಕಾಲದ ಮುಂಡನವೊಂದು, ಪತಿವಿಯೋಗಕಾಲದ ಮುಂಡನವೊಂದು. ಯಾಗಕಾಲದ ಮುಂಡನದವಿಷಯದಲ್ಲಿ "ಏವಂ ಪತ್ನೀಕೇಶವರ್ಜಂ" ಎಂದು ಶ್ರೌತಸೂತ್ರವೇ ಇರುವುದರಿಂದ ಮೇಲಣ ಶ್ಲೋಕವನ್ನು ಬರೆದ ನವೀನವಿದ್ವಾಂಸನು ವಿಧವೆಯರನ್ನೇ

ಕುರಿತು ಬರೆದನೆಂದು ನಿರ್ಣಯಿಸಬೇಕಾಗಿದೆ. ಕ್ಷತ್ರಿಯ ವಿಧವೆಯರುವೇಲಣ ಶ್ಲೋಕದ ರೀತಿಯಲ್ಲಿಯೇ ಆಚರಣೆಯನ್ನಿಟ್ಟುಕೊಂಡಿರುವರು. ತಲೆಯನ್ನೆಲ್ಲಾ ನುಣ್ಣಗೆ ಬೋಳಿಸಿಕೊಳ್ಳಬೇಕೆಂದು ಕ್ಷತ್ರಿಯಸ್ತ್ರೀಯರಿಗೆ ಹೇಳುವುದಕ್ಕೆ ಬ್ರಾಹ್ಮಣನಿಗೆ ಬಾಯೂ ಇಲ್ಲ, ಅವರು ಹಾಗೆಮಾಡುವುದೂ ಇಲ್ಲ. ಬ್ರಾಹ್ಮಣಸ್ತ್ರೀಗೆ ಘೋಷಾಪದ್ಧತಿಇಲ್ಲದುದರಿಂದಲೂ ಮುಸಲ್ಮಾನರ ಹಾವಳಿಯನ್ನು ತಪ್ಪಿಸುವುದಕ್ಕೆ ಬೇರೆ ದಾರಿಯಿಲ್ಲದಿದ್ದುದರಿಂದಲೂ ಶಿರೋಮುಂಡನವನ್ನು ನವೀನವಿದ್ವಾಂಸರೂ ಮಠಾಧಿಪತಿಗಳು ಕೆಲವರೂ ವಿಧಿಸಿದರು. ಹಾಗೆ ವಿಧಿಸಿದ್ದ ಪಕ್ಷಕ್ಕೆ ಸ್ಪಷ್ಟವಾಗಿ ಏಕೆ ಶ್ಲೋಕವನ್ನು ಬರೆಯಲಿಲ್ಲವೆಂದು ಕೇಳಬಹುದಾಗಿದೆ. ಈ ಆಕ್ಷೇಪಣೆಗೂ ಸಮಾಧಾನವಿದೆ, ವಿಧವೆಯರಲ್ಲಿ ಎರಡುವಿಧ. ಅಭರ್ತೃಕವಿಧವೆ ಮತ್ತು ಸಭರ್ತೃಕವಿಧವೆ. "ಮಯಾಪತ್ಯಾ ಜರದಷ್ಟಿರ್ಯಥಾಸಹ" ಎಂಬ ವೇದವಚನವನ್ನೂ "ಸಖ್ಯೈತ್ತೇಮಾಯೋಷಗಃ" ಎಂಬ ವೇದವಚನವನ್ನೂ ಉಲ್ಲಂಘಿಸಿ ಗೃಹಸ್ಥಾಶ್ರಮದಿಂದಲೇ ಸನ್ಯಾಸಾಶ್ರಮಕ್ಕೆ ಹಾರುವ ಸನ್ಯಾಸಿಗಳ ಪತ್ನಿಯರು ಸಭರ್ತೃಕವಿಧವೆಯರಾಗಿರುತ್ತಾರೆ. ಇವರಿಗೆ ಇನ್ನಾವ ಹೆಸರೂ ಶಾಸ್ತ್ರತಃ ಸಲ್ಲುವುದಿಲ್ಲ. ಏಕೆಂದರೆ ಗೃಹಸ್ಥಾಶ್ರಮದಲ್ಲಿರುವಾಗ ಸನ್ಯಾಸಾಶ್ರಮವನ್ನು ಸ್ವೀಕರಿಸುವುದಕ್ಕೆ ಮೈಥುನಗಂಧ ಪುಷ್ಪಾಕ್ಷತವಾಸೋ ಭೂಷಣಾದಿ ಸರ್ವಭೋಗತ್ಯಾಗವನ್ನೂ ಮಾಡಿ ಆತ್ಮಪಿಂಡವನ್ನು ಹಾಕಿಕೊಂಡು ಹೆಂಡತಿಯ ಬಳಗೆಹೋಗಿ ನಾನು ಸರ್ವಭೋಗತ್ಯಾಗವನ್ನೂ ಮಾ

ಡಿದೇನೆ; ಆತ್ಮಪಿಂಡವನ್ನು ಹಾಕಿಕೊಂಡಿದೇನೆ. ನನ್ನ ಭಾಗಕ್ಕೆ ನೀನು ಸತ್ತಿದ್ದೀಯೆ, ನಿನ್ನ ಭಾಗಕ್ಕೆ ನಾನು ಸತ್ತಿದ್ದೇನೆ. ವಿವಾಹದಲ್ಲಿ ನಾನು ಕಟ್ಟಿದ ತಾಳಿಯನ್ನು ನೀನಿನ್ನು ಧರಿಸಿರಕೂಡದು. ನನಗೆ ಶ್ರಾದ್ಧಾದಿಗಳನ್ನೂ ಮಾಡಕೂಡದು ಎಂದು ಹೇಳಿ ಆಕೆಯಿಂದ ತಾಳಿಯನ್ನು ತಂದು ಬಿಡಬೇಕು. ಹೀಗೆಲ್ಲಾ ಆದಮೇಲೆ ಅವಳು ಮುತ್ತೈದೆಯಾಗಿರುವುದು ಸಾಧ್ಯವೇ ಅಲ್ಲ. ಅಂತಹ ಸಭರ್ತೃಕವಿಧವೆಯರು ಪ್ರೌಢೆಯರಾಗಿದ್ದರೂ ಸರಿ ಅಪ್ರೌಢೆಯರಾಗಿದ್ದರೂ ಸರಿ, ಶಿರೋಮುಂಡನವನ್ನು ಮಾಡಿಕೊಳ್ಳಬೇಕಾದ ಕ್ರಮವು ಹೀಗಿರುವುದೆಂದು ,,ಸರ್ವಾನ್ಕೇಶಾನ್ ಸಮುದ್ಧೃತ್ಯ'' ಎಂಬ ಶ್ಲೋಕವು ತಿಳಿಸುವುದು ಎಂಬುದನ್ನು ವ್ಯಾಖ್ಯಾನಕಾರರು ಸ್ಪಷ್ಟವಾಗಿ ಹೇಳುವುದಕ್ಕೆ ಅಧೈರ್ಯಪಟ್ಟು ಗೂಢವಾಗಿ ತಿಳಿಸಿರುವಂತೆ ನಾವು ಭಾವಿಸುತ್ತೇವೆ. ಸನ್ಯಾಸಿಯ ರೂಪದಲ್ಲಿ ಪತಿಯು ಬದುಕಿರುವುದರಿಂದ ಸಂಪೂರ್ಣಮುಂಡನವಿಲ್ಲದೆ ಅಲ್ಪಮುಂಡನ ಮಾತ್ರ ಇರುವಸಂಗತಿಯನ್ನು ಮೇಲಣ ಶ್ಲೋಕವು ತಿಳಿಸುವುದು. ಮೇಲಣಶ್ಲೋಕಕ್ಕೆ ವೇದಾಧಾರವಿಲ್ಲ.

## III. ನಿಯೋಗ ವಿಧಿಯ ಆಧಾರಗಳು.

ಸಹಗಮನವಿಧಿಯೂ ಸುಳ್ಳು; ವಪನವಿಧಿಯೂ ಸುಳ್ಳು ವಿಧವೆಯರಿಗೆ ಬ್ರಹ್ಮಚರ್ಯ ವಿಧಿಯೂ ಸುಳ್ಳು ; ಏಕೆಂದರೆ ಸ್ತ್ರೀಪುರುಷರಿಬ್ಬರಿಗೂ ನಿಯೋಗಾಧಿಕಾರವನ್ನು ವೇದಾದಿಗ್ರಂಥಗಳು ಕೊಟ್ಟಿವೆ. ಆ ವಚನಗಳಲ್ಲಿ ಕೆಲವನ್ನು ಇಲ್ಲಿ ತೋರಿಸುತ್ತೇವೆ.

## A ವೇದಾಧಾರಗಳು.

(I) ಕುಹಸ್ವಿದ್ದೋಷಾ ಕುಹವಸ್ತೋ ರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ । ಕೋವಾಂಶಯುತ್ರಾ ವಿಧವೇವ ದೇವರಂ ಮರ್ಯಂ ನಯೋಷಾಕೃಣುತೇ ಸದಸ್ಥಆ (ಋಗ್ವೇದ-ಅ ೭, ಅ೮, ವ ೧೮, ಮಂತ್ರ ೨)

ಶ್ರೀಮದ್ದಯಾನಂದ ಸರಸ್ವತಿಗಳ ಭಾಷ್ಯ॥ ಏಷಾಮಭಿ ಅತ್ರವಿಧವಾ ವಿಸ್ತ್ರೀಕನಿಯೋಗ ವ್ಯವಸ್ಥಾವಿಧೀಯತ ಇತಿ॥ (ಕುಹಸ್ವಿದ್ದೋಷಾ) ಹೇವಿವಾಹಿತ ಸ್ತ್ರೀಪುರುಷೌಯುವಾಂ (ಕುಹ) ಕಸ್ಮಿನ್‌ಸ್ಥಾನೇ (ದೋಷಾ)ರಾತ್ರಿವಸಥಃ । (ಕುಹ) ಅಶ್ವಿನಾ (ವಸ್ತೋಃ) ದಿವಸೇ ಚಕ್ವಾವಾ ಸಂಕುರುಥಃ । (ಕುಹಾಭಿ......) ಕ್ವಾಭಿಪಿತ್ವಂ ಪ್ರಾಪ್ತಿಂ ಕರತಃ ಕುರುತಃ। (ಕುಹೋಷತುಃ) ಕ್ವಾಯುವಯೋರ್ನಿಜಸ್ಥಾನವಾಸೊಸ್ತಿ । (ಕೋವಾಂಶಯುತ್ರಾ) ಶಯನಸ್ಥಾನಂ ಯುವಯೋಃಕ್ವಾಸ್ತಿ ॥

ಇತಿ ಸ್ತ್ರೀಪುರುಷೌ ಪ್ರತಿಪ್ರಶ್ನೇನ ದ್ವಿವಚನೋಚ್ಚಾರಣೇನ ಚೈಕಸ್ಯ ಪುರುಷಸ್ಯೈಕೈವ ಸ್ತ್ರೀಕರ್ತುಂ ಯೋಗ್ಯಾಸ್ತಿ । ತಥೈಕಸ್ಯಾಸ್ತ್ರೀಯಾಏಕಏವಪುರುಷಶ್ಚ । ದ್ವಯೋಃ ಪರಸ್ಪರಂ ಸದೈವ ಪ್ರೀತಿರ್ಭವೇನ್ನಕದಾಚಿದ್ವಿಯೋಗವ್ಯಭಿಚಾರೌ ಭವೇತಾಮಿತಿದ್ಯೋತ್ಯತೇ ॥

(ವಿಧವೇವದೇವರಂ) ಕಂಕೇವ । ಯಥಾದೇವರಂ ದ್ವಿತೀಯವರಂ ನಿಯೋಗೇನಪ್ರಾಪ್ತಂ ವಿಧವಾಇವ । ಅತ್ರಪ್ರಮಾಣಂ ದೇವರಃ ಕಸ್ಮಾದ್ದ್ವಿತೀಯೋವರಉಚ್ಯತೇ । ನಿರುಕ್ತ ಅ ೩, ಖಂಡ ೧೫॥ ವಿಧವಾಯಾ ದ್ವಿತೀಯಪುರುಷೇಣ ಸಹ ನಿಯೋಗಕರಣೇ ಆಜ್ಞಾಸ್ತಿ । ತಥಾಪುರುಷಸ್ಯಚವಿಧವಯಾಸಹ। ವಿಧವಾ ಸ್ತ್ರೀಮೃತಕ ಸ್ತ್ರೀಕಪುರುಷೇಣ ಸಹೈವ ಸಂತಾನಾರ್ಥಂ ನಿಯೋಗಂ ಕುರ್ಯಾತ್। ನಕುಮಾರೇಣ ಸಹತಥಾ ಕುಮಾರಸ್ಯ ವಿಧವಯಾಸಹ ಚ । ಅರ್ಥಾತ್ ಕುಮಾರಯೋಃ ಸ್ತ್ರೀಪುರುಷಯೋ ರೇಕವಾರಮೇವ ವಿವಾಹಸ್ಸ್ಯಾತ್ । ಪುನರೇವಂ ನಿಯೋಗಶ್ಚ

ನೈವದ್ವಿಜೇಷುದ್ವಿತೀಯವಾರಂ ವಿವಾಹೋ ವಿಧೀಯತೇ । ಪುನರ್ವಿವಾಹಸ್ತು ಖಲುಶೂದ್ರವರ್ಣ ಏವವಿಧೀಯತೇ । ತಸ್ಯೈವಿದ್ಯಾವ್ಯವಹಾರ ರಹಿತತ್ವಾತ್ । ನಿಯೋಜಿತೌ ಸ್ತ್ರೀಪುರುಷೌ ಕಥಂ ಪರಸ್ಪರವರ್ತೇತಾ ಮಿತ್ಯತ್ರಾಹ ॥

(ಮರ್ತ್ಯಂನಯೋಷಾ) ಯಥಾವಿವಾಹಿತಂ ಮನುಷ್ಯಂ (ಸದಸ್ಥೇ) ಸಮಾನಸ್ಥಾನೇ ಸಂತಾನಾರ್ಥಂ (ಯೋಷಾ ವಿವಾಹಿತಸ್ತ್ರೀ(ಕೃಣುತೇ) ಆಕೃಣುತೇ । ತಥೈವ ವಿದವಾವಿಗತ ಸ್ತ್ರೀಕಶ್ಚ ಸಂತಾನೋತ್ಪತ್ತಿ ಕರಣಾರ್ಥಂ ಪರಸ್ಪರಂ ನಿಯೋಗಂ ಕೃತ್ವಾವಿವಾಹಿತ ಸ್ತ್ರೀಪುರುಷವತ್ ವರ್ತೇಯಾತಾಂ ॥

ಭಾಷಾಂತರ॥ ಎಲೈ ನವೀನ ವಿವಾಹಿತ ಸ್ತ್ರೀಪುರುಷರಿರಾ ! ವಿಧವೆಯೂ ಸಂತಾನಾರ್ಥಿಯಾಗಿ ದ್ವಿತೀಯ ವರನನ್ನು ಸೇರಿ ನಿಯೋಗವನ್ನು ಮಾಡಿಕೊಂಡು ಸಂಪೂರ್ಣವಾದ ಪ್ರೀತಿಯೊಡನೆ ಜತೆಜತೆಯಾಗಿರುವಂತೆಯೂ, ವಿವಾಹಿತ ಸ್ತ್ರೀಯೂ ತನ್ನ ಪತಿಯೊಡನೆ ಕಲೆತು ಸಮಾನಸ್ಥಾನೀಯುಳ್ಳಾಗಿ ಆಹಾರ ವಿಹಾರಗಳನ್ನು ಸಗುವಂತೆಯೂ, ನೀವು ರಾತ್ರಿಯಲ್ಲೆಲ್ಲಿರುತ್ತೀರಿ ? ಹಗಲೆಲ್ಲಿರುತ್ತೀರಿ ? ಊಟ ಮುಂತಾದುವುಗಳನ್ನೆಲ್ಲಿಮಾಡುತ್ತೀರಿ ? ನಿಮ್ಮ ನಿಜವಾದ ವಾಸಸ್ಥಾನವಾವುದು ? ರಾತ್ರಿಯಲ್ಲೆಲ್ಲಿ ಹೇಗೆ ಮಲಗುತ್ತೀರಿ ?

ಮೇಲಣ ವೇದವಚನದಿಂದಲೂ ಶ್ರೀಮದ್ದಯಾನಂದ ಸರಸ್ವತಿಗಳ ಭಾಷ್ಯದಿಂದಲೂ ಮುಂದೆಕೊಡುವ ವಿಷಯಗಳು ಸ್ಥಾಪಿತಗಳಾಗಿರುವುವು:—

(a) ದ್ವಿವಚನಪ್ರಯೋಗವೇ ಇರುವುದರಿಂದ ಬಬ್ಬ

ಗಂಡಸಿಗೆ ಒಬ್ಬಳೇ ಹೆಂಡತಿ, ಮತ್ತು ಒಬ್ಬಳು ಸ್ತ್ರೀಗೆ ಒಬ್ಬನೇ ಗಂಡನು.

(b) 'ವಿಧವೇವದೇವರಂ' ಎಂಬ ಪ್ರಮಾಣವಲ್ಲದೆ 'ಮರ್ತ್ಯಂ ನಯೋಷಾ' ಎಂಬ ಪ್ರಮಾಣವು ಬೇರೆಯಾಗಿರುವುದರಿಂದ ಅರ್ಥಸಾಮಂಜಸ್ಯವು ಹಾಳಾಗದಿರುವುದಕ್ಕಾಗಿ ದ್ವಿಜಪುರುಷನಿಗೇ ಆಗಲಿ, ದ್ವಿಜಸ್ತ್ರೀಗೇ ಆಗಲಿ ಪುನರ್ವಿವಾಹವಿಲ್ಲವೆನ್ನಬೇಕು.

(c) ಕನ್ಯೇವದೇವರಂ ಎಂದಿಲ್ಲದಿರುವುದರಿಂದ ವಿಧವೆಯು ಕುಮಾರನನ್ನಾಗಲಿ ವಿಧುರನು ಕನ್ಯೆಯನ್ನಾಗಲಿ ವಿವಾಹದಿಂದಲೂ ಸೇರಕೂಡದು, ನಿಯೋಗದಿಂದಲೂ ಸೇರಕೂಡದು.

(d) 'ವಿಧವೇವದೇವರಂ' ಎಂದಿರುವುದರಿಂದ ವಿಧವೆಯರು ವಿಧುರರನ್ನೇ, ವಿಧುರರು ವಿಧವೆಯರನ್ನೇ ನಿಯೋಗಮಾಡಿಕೊಳ್ಳಬೇಕು.

(e) ವಿಧವಾದೇವರರು ವಿವಾಹಿತ ಸ್ತ್ರೀಪುರುಷರಂತೆಯೇ ಪ್ರೀತಿಸುತ್ತಿರಬೇಕು.

'ದೇವರ' ಎಂದರೆ ಗಂಡನ ತಮ್ಮನೆಂಬ ಒಂದೇ ಅರ್ಥವಿರುವುದು, ಮತ್ತಾವುದೂ ಇಲ್ಲವೆಂದು ನವೀನ ವಿದ್ವಾಂಸರೂ ಮಠಾಧಿಪತಿಗಳಲ್ಲನೇಕರು ಭಾವಿಸಿಕೊಂಡಿರುವರು. ಷಡಂಗಗಳಭ್ಯಾಸಂಗವಿಲ್ಲದಿರುವುದೇ ಈ ತಪ್ಪುತಿಳುವಳಿಕೆಗೆ ಕಾರಣ. ನಿರುಕ್ತದಲ್ಲಿರುವ 'ದ್ವಿತೀಯೋವರಃ' ಎಂಬುದಕ್ಕೂ ಕೆಲವರು ಅಪಾರ್ಥಮಾಡುತ್ತಿದ್ದಾರೆ. ದ್ವಿತೀಯವರ ಎಂದರೆ ಎರಡನೇ ಯಾವತ್ತೂ ವರನಾಗಿರುವವನೆಂದರ್ಥ. ಬ್ರಹ್ಮಚಾರಿಯೇ ಆಗಲಿ ಬದುಕಿರುವ ಭಾರ್ಯೆಯನ್ನುಳ್ಳವನೇ ಆಗಲಿ ದೇವರನಾ

ಗುವುದಕ್ಕವಕಾಶವಿಲ್ಲ. ಹೆಂಡತಿಸತ್ತಿರುವನೇ ಎಂದರೆ ವಿಧುರನೇ ದೇವರನಾಗಬೇಕು. ಈಸಂಗತಿಯನ್ನು ಮರೆಯದಿರಬೇಕು.

ವಿಧವಾವಿಧುರರ ನಿಯೋಗವು ವೇದದಲ್ಲಿಯೂ ಉಪಮಾನಸ್ಥಾನವನ್ನು ಹೊಂದಿರುವುದರಿಂದ ಅನುಪಾದೇಯುವೆಂದೆಂದಿಗೂ ಆಗುವುದಿಲ್ಲ. ವಿಧವೇವದೇವರಂ ಎಂದಿರುವುದರಿಂದ ಸಹಗಮನವು ವೇದವಿರುದ್ಧವಾದ ಪಾಪಕೃತ್ಯ. ವಿಧವಾವಪನವೂ ವೇದವಿರುದ್ಧವಾದ ಕರ್ಮ. ವಿಧುರರು ಕನ್ನೆಯನ್ನು ಮಂತ್ರಸಹಿತವಾಗಿ ಮದುವೆಮಾಡಿಕೊಳ್ಳುತ್ತಿರುವುದು ವೇದವಿರುದ್ಧವಾದ ದುರಾಚಾರವಾಗಿದೆ, ಈ ದುರಾಚಾರವನ್ನು ಮಠಾಧಿಪತಿಗಳು ಕೆಲವರ ಅನುಮತಿಯಿಂದ ನವೀನವಿದ್ವಾಂಸರು ಸ್ಥಾಪಿಸದಿದ್ದರೆ ಮತ್ತಾರು ಸ್ಥಾಪಿಸಿದರು ?

(೨) ಅದೇ ವೃಘ್ನ್ಯ ಪತಿಘ್ನೀ ಹ್ಯೈಧಿಶಿವಾಪಶುಭ್ಯಃ ಸುಯಮಾಃ ಸುವರ್ಚಾಃ। ಪ್ರಜಾವತೀವೀರಸೂರ್ದೇವೃಕಾಮಾಶ್ಯೋನೇ ಮಮಗ್ನಿಂ ಗಾರ್ಹಪತ್ಯಂ ಸಪರ್ಯಾ॥

(ಅಥರ್ವಣ-ಕಾಂ ೧೪, ಅ ೨, ಮಂತ್ರ, ೧೮) ಪದವಿಭಾಗ॥ ಅದೇವೃಘ್ನೀ। ಅಪತಿಘ್ನೀ। ಇಹ। ಏಧಿ। ಶಿವಾಪಶುಭ್ಯಃ। ಸುಯಮಾಃ ಸುವರ್ಚಾಃ। ಪ್ರಜಾವತೀ। ವೀರಸೂಃ। ದೇವೃಕಾಮಾ। ಶ್ಯೋನಾ ಇಮಂ। ಅಗ್ನಿಂ। ಗಾರ್ಹಪತ್ಯಂ। ಸಪರ್ಯಾ॥

ಶ್ರೀಮದ್ದಯಾನಂದ ಸರಸ್ವತಿಗಳು 'ಕುಹಸ್ವಿದ್ದೋಷಾ' ಎಂಬ ವೇದಮಂತ್ರಕ್ಕೆ ಕೊಟ್ಟಿರುವ ಭಾಷ್ಯವನ್ನುಜ್ಞಾಪಕದಲ್ಲಿಟ್ಟಿರುವುದಲ್ಲದೆ 'ಅರ್ಥಾತ್ಪ್ರಕರಣಾಲ್ಲಿಂಗಾದೌಚಿತ್ಯಾದರ್ಥನಿರ್ಣಯಃ'ಎಂಬ ನಿಯಮವನ್ನೂ ಜ್ಞಾಪಕದಲ್ಲಿಡಬೇಕು. ಅದೇ ವೃಘ್ನಿಯಾಗಿಯೂ ದೇವೃಕಾಮೆಯಾಗಿಯೂ ಇರಬೇಕಾದರೆ ವಿಧವೆಯಾಗಿರಬೇಕು. ವಿಧವೆಯಾಗಿದ್ದರೆ

ಗಾರ್ಹಪತ್ಯಾಗ್ನಿ ಸೇವೆಯಿಲ್ಲ ವಿಧವಾಗ್ನಿಸೇವೆಮಾತ್ರ ವಿರುವುದು 'ಪ್ರಜಾತಂತುಂ ಮಾವ್ಯವತ್ಸೇತ್ಸೀಃಎಂದು ತೈತ್ತಿರೀಯೋಪನಿಷತ್ತು ಹೇಳುತ್ತದೆ. ಪ್ರಜಾನುತ್ಪಾದಯ ಎಂದು ಐತ್ತರೇಯ ಬ್ರಾಹ್ಮಣವು ವಿಧಿಸುತ್ತದೆ. ಸಂತಾನಕ್ಷಯುವಾಗದಿರುವುದಕ್ಕೆ ದ್ವಿತೀಯವರನಿಂದ ಪುತ್ರೋತ್ಪಾದನೆಯನ್ನು ಮಾಡಿಕೊಳ್ಳುವುದು ಹೆಂಗಸಿನ ಕರ್ತವ್ಯವಾಗಿದೆ. ಈ ಸಂಗತಿಗಳನ್ನು ಜ್ಞಾಪಕದಲ್ಲಿಟ್ಟಿರಬೇಕು.

ಭಾಷಾಂತರ॥ ಎಲೆನಾರಿ ದ್ವಿತೀಯಪತಿಗೇ ಆಗಲಿ ವಿವಾಹಿತಪತಿಗೇ ಆಗಲಿ ದುಃಖವನ್ನುಂಟುಮಾಡದವಳಾಗಿಯೂ, ಸದಾಚಾರನಿರತಳಾಗಿಯೂ, ಪಶುಗಳಿಗೆ ಹಿತಚಿಂತಕಳಾಗಿಯೂ, ವಿದ್ಯೆಯಿಂದಲೂ ಸುಶೀಲತೆಯಿಂದಲೂ ಸುವರ್ಚಸೆಯಾಗಿಯೂ ಪ್ರಜಾವತಿಯಾಗಿಯೂ, ವೀರಮಾತೆಯಾಗಿಯೂ ಪ್ರಜೋತ್ಪಾದನ ಮಾಡದೆ ವಿವಾಹಿತಪತಿಯು ಸತ್ತರೆ ಸಂತಾನಕ್ಷಯವನ್ನು ತಪ್ಪಿಸುವುದಕ್ಕೆ ದ್ವಿತೀಯ ಪತಿಯನ್ನು ಕಾಮಿಸುವವಳಾಗಿಯೂ, ಲೋಕಹಿತಚಿಂತಕಳಾಗಿಯೂ, ಗಾರ್ಹಪತ್ಯಾಗ್ನಿಯನ್ನೋ ಅಥವಾ ವಿಧವಾಗ್ನಿಯನ್ನೋ ಸೇವಿಸುವವಳಾಗಿಯೂ ಈಗೃಹದಲ್ಲಿದ್ದುಕೊಂಡು ಬಾಳು !

ವಿಧವೆಯು ಸಂತಾನಕ್ಷಯುವನ್ನು ತಪ್ಪಿಸುವುದಕ್ಕಾಗಿ ನಿಯೋಗವಿಧಿಯಿಂದ ದ್ವಿತೀಯ ಪತಿಯನ್ನು ಮಾಡಿಕೊಂಡು ಪ್ರಜಾವತಿ ಯಾಗುವುದು ಸದಾಚಾರ ನಿರತತೆಗೇ ಆಗಲಿ ಸುಶೀಲತೆಗೇ ಆಗಲಿ ಹಾನಿಕರವಲ್ಲವೆಂಬುದು ಈ ಮಂತ್ರದಿಂದ ಸ್ಪಷ್ಟಪಟ್ಟಿದೆ. ವೇದವು ನಿಯೋಗವನ್ನು ವಿಧಿಸುತ್ತಿರುವಲ್ಲಿ „ಅಶ್ವಾಲಂಭಂ ಗವಾಲಂಭಂ ಸನ್ಯಾಸಂ ಪಲಪೈತೃ

ಕಂ। ದೇವರೇಣ ಸುತೋತ್ಪತ್ತಿಃ ಕಲೌಪಂಚವಿವರ್ಜಯೇತ್ ॥ " ಎಂಬಶ್ಲೋಕವನ್ನು ಪರಾಶರ ಮಹರ್ಷಿಗಳು ಬರೆದರೆಂದು ಹೇಳೋಣವ್ರೋ, ಮುಸಲ್ಮಾನರ ಹಾವಳಿಯ ಕಾಲದ ವೇದಮೂರ್ತಿ ನಾಮಧಾರಕನಾದ ನವೀನವಿದ್ವಾಂಸನೊಬ್ಬನು ಬರೆದನೆಂದು ಹೇಳೋಣವ್ರೋ ? ಈ ಶ್ಲೋಕವನ್ನು ಬರೆದ ಬಡಪಾಯಿಗೆ ಅಶ್ವಮೇಧದ ಸಂಗತಿಯೂ ತಿಳಿದಿರಲಿಲ್ಲ, ಗೋಮೇಧದ ಸಂಗತಿಯೂ ತಿಳಿದಿರಲಿಲ್ಲ ಪಿತೃಯಜ್ಞದ ಸಂಗತಿಯೂ ತಿಳಿದಿರಲಿಲ್ಲ. ಪ್ರಾಣಿವಧೆಯನ್ನೇ ಆಗಲಿ ಮಾಂಸ ಭಕ್ಷಣವನ್ನೇ ಆಗಲಿ ವೇದವು ವಿಧಿಸುವುದಿಲ್ಲ. ವಾಮಮಾರ್ಗಿಗಳ ಅಪಾರ್ಥಗಳಿಂದ ಈ ದುರಾಚಾರಗಳು ಹುಟ್ಟಿದುವು. ಈ ವಿಷಯಗಳನ್ನು ಬಿಹಾರಿಲಾಲ್ ಎಂಬ ಮಹಾವಿದ್ವಾಂಸರು ವೇದಗ ಅಂಗೋಪಾಂಗಗಳನ್ನು ಕುರಿತು ಬರೆದಿರುವ ಇಂಗ್ಲೀಷು ಪುಸ್ತಕದಲ್ಲಿ ಚೆನ್ನಾಗಿ ಚರ್ಚಿಸಿರುತ್ತಾರೆ. ಬೇಕಾದವರು ಆ ಪುಸ್ತಕವನ್ನು ನೋಡಬಹುದು. ದೇವರನಿಂದ ಎಂದರೆ ದ್ವಿತೀಯವರನಿಂದ, ಸ್ಮುತೋತ್ಪತ್ತಿಯಾಗುವುದನ್ನು ಬಿಡಬೇಕಾದರೆ ವೇದವನ್ನೂ ಬಿಡಬೇಕು. ಈ ಶ್ಲೋಕವನ್ನು ಬರೆದ ವೇದಮೂರ್ತಿನಾಮಧಾರಕನಿಗೆ ಉತ್ತರಕ್ರಿಯೆಯಲ್ಲಿ ಹೇಳುವ "ಉದೀರ್ಷ್ವ ನಾರ್ಯಭಿಜೀವ ಲೋಕಂ" ಎಂಬ ವೇದಮಂತ್ರದ ಜ್ಞಾನವೂ ಇರಲಿಲ್ಲವೆಂಬುದು ಮುಂದಕ್ಕೆ ಸ್ಪಷ್ಟಪಡುತ್ತದೆ. ಮುಸಲ್ಮಾನರ ಭಯದಿಂದ ವಿಧವೆಯರ ತಲೆಯನ್ನು ಬೋಳಿಸುವುದಕ್ಕೆ ಪ್ರಾರಂಭಿಸಿದಮೇಲೆ ಈ ಶ್ಲೋಕವನ್ನು

ನವೀನ ವಿದ್ವಾಂಸರು ಬರೆಯಬೇಕಾಯಿತು. ಈ ನವೀನ ವಿದ್ವಾಂಸರು ಸೃಷ್ಟಿಸಿರುವ ಕಲಿಯುಗಕ್ಕೆ ವೇದಾಧಾರ ವಾವುದೂ ಇಲ್ಲದಿರುವ ಸಂಗತಿಯನ್ನು ವೇ॥ ಶಾಮ ಶಾಸ್ತ್ರಿಗಳವರು ತಮ್ಮ ಗವಾಮಯನವೆಂಬ ಇಂಗ್ಲೀಷು ಪುಸ್ತಕದಲ್ಲಿ ಸ್ಪಷ್ಟಪಡಿಸಿರುತ್ತಾರೆ. ಶ್ರೀಮಠಾಧಿಪತಿ ಗಳಲ್ಲಿ ಅನೇಕರಿಗೆ ಇಂಗ್ಲೀಷು ಭಾಷೆಯ ಪರಿಜ್ಞಾನವಿಲ್ಲದಿ ರುವುದಕ್ಕಾಗಿ ವ್ಯಸನಪಡಬೇಕಾಗಿದೆ ,,ಅದೇವೃಘ್ನೀ,, ಎಂತಲೂ, 'ದೇವೃಕಾಮಾ' ಎಂತಲೂ, ಈ ವೇದಮಂ ತ್ರದಲ್ಲಿರುವುದರಿಂದ ವಿಧವೆಯರಿಗೆ ಬ್ರಹ್ಮಚರ್ಯವೂ, ಸಹಗ ಮನವೂ, ,ವಪನವೂ, ವೇದವಿರುದ್ಧಗಳೆಂದು ನವೀನ ವಿ ದ್ವಾಂಸರು ಬರೆದಿಟ್ಟುಕೊಳ್ಳಬೇಕಾಗಿದೆ. "ಪ್ರಜಾತಂತುಂ ಮಾವ್ಯವಚ್ಛೇತ್ಸೀಃ" ಎಂಬುದೇ ವಿಧವೆಯರಿಗೆ ವೇದೋ ಕ್ತವಿಧಿ.

[೩] ಯಾಪೂರ್ವಂಪತಿಂ ವಿತ್ವಾಥಾನ್ಯಂ ವಿಂದತೇಪರಂ । ಪಂ ಚೌದನಂಚತಾವ ಜಂದದಾತೋನ ವಿಯೋಷತಃ ॥

[ಅಥರ್ವಣ ಕಾಂ ೯, ಸೂಕ್ತ, ೫, ಮಂತ್ರ ೨೭]

ಪ್ರಥಮ ಭಾಷಾಂತರ- ಮೊದಲೊಬ್ಬ ಪತಿಯನ್ನು ಹೊಂದಿದ್ದ ಹೆಂಗಸು ಆತನು ಸತ್ತ ಮೇಲೆ ಬೇರೊಬ್ಬನನ್ನು ಹೊಂದಬಹುದು, ಪಂಚೌದನಾಹುತಿಯನ್ನು ಕೊಟ್ಟು ಅಜ ಹೋಮವನ್ನು ಮಾಡಿದ್ದ ದಂಪತಿಗಳು ಪರಲೋಕದಲ್ಲಿ ಬ ಬ್ಬರನ್ನೊಬ್ಬರು ಅಗಲಿರುವುದಿಲ್ಲ.

ಇಲ್ಲಿ ತೌ ಎಂದರೆ ವಿವಾಹಿತ ದಂಪತಿಗಳೆಂದು ಕೆಲವರು ಹೇಳು

ತ್ತಾರೆ. ಈ ಅರ್ಥದ ಪ್ರಕಾರ ನಿಯೋಗವನ್ನು ಮಾಡಿಕೊಂಡ ವಿಧವೆಗೆ ಸ್ವರ್ಗನಷ್ಟವಾಗುವುದಿಲ್ಲ.

ದ್ವಿತೀಯ ಭಾಷಾಂತರ- ಮೃತನಾದ ಪೂರ್ವಪತಿಯನ್ನು ಬಿಟ್ಟು ಪರಪತಿಯನ್ನು ಹೊಂದಬಹುದು. ಈ ವಿಧವಾ ವಿಧುರರು ಅಗ್ನಿಗೆ ಪಂಚೌದನಾಹುತಿಯನ್ನು ಕೊಡುವವರಾದರೆ ಪರಸ್ಪರ ಪ್ರೇಮವು ಹೆಚ್ಚಿ ಒಬ್ಬರನ್ನೊಬ್ಬರು ಅಗಲದೆ ಇರುವರು.

ಯಾವ ಅರ್ಥವನ್ನಿಟ್ಟುಕೊಂಡರೂ ನಿಯೋಗವಿಧಿಯೆಂತೂ ಸ್ಥಾಪಿತವಾಗುತ್ತದೆ. ಸಹಗಮನವನ್ನೂ ವಿಧವಾಸ್ತ್ರೀವಪನವನ್ನೂ ಬ್ರಹ್ಮಚರ್ಯವ್ರತವನ್ನೂ ಈ ವೇದಮಂತ್ರವೂ ನಿಷೇಧಿಸುತ್ತದೆ. ನಿಯೋಗವುಂಟೆಂದಮೇಲೆ ಸಹಗಮನವೂ ಇಲ್ಲ, ವಪನವೂ, ಬ್ರಹ್ಮಚರ್ಯವ್ರತವೂ ಇಲ್ಲ. „ಪ್ರಜಾತಂತುಂ ಮಾವ್ಯವಚ್ಛೇತ್ಸೀಃ„ ಎಂಬುದೇ ವೇದೋಕ್ತವಿಧಿ.

(೪) ಸಮಾನಲೋಕೋಭವತಿ ಪುನರ್ಭುವಾಪರಃಪತಿಃ । ಯೋಽಜಂ ಪಂಚೌದನಂ ದಕ್ಷಿಣಾಜ್ಯೋತಿಷಂ ದದಾತಿ ॥

[ಅಥರ್ವಣ ಕಾಂಡ ೯, ಸೂಕ್ತ ೫]

„ಪುನರ್ಭುವಾ„ ಎಂಬುದು „ಪುನರ್ಭೂ„ ಎಂಬುದರ ರೂಪಾಂತರ ಎರಡನೆಯ ಹೆಂಡತಿಯನ್ನು ನಿಯೋಗದಿಂದ ಹೊಂದಿದಗಂಡಸಿಗೂ, ಎರಡನೆಯ ವರನನ್ನು ಹೊಂದಿದ ಹೆಂಗಸಿಗೂ, ಈ ಶಬ್ದವನ್ನೇ ಪ್ರಯೋಗಿಸಬಹುದಾಗಿದೆ. ಇಲ್ಲಿ„ಪರಃಪತಿಃ„ಎಂಬುದರಿಂದವಿಶೇಷಿಸಲ್ಪಟ್ಟದೆ

ಭಾಷಾಂತರ- ಎರಡನೆಯದಾವರ್ತಿ ಪತಿಯಾದ ಯಾವ ಪುನರ್ಭುವು ಜ್ಯೋತಿಸ್ಸ್ವರೂಪನಾದ ಅಗ್ನಿಗೆ ಶ್ರದ್ಧಾಭಕ್ತಿಗ

ಳೊಡನೆ ಪುಂಚೌದನಾಹುತಿಯನ್ನು ಕೊಡುವನಾಗುತ್ತಾನೆ ಯೋ ಆತನು ಸಮಾನಸುಖವನ್ನು ಅನುಭವಿಸುವನಾಗುತ್ತಾನೆ.

ಇಲ್ಲಿ ಲೋಕವೆಂದರೆ ಸುಖ. ಶ್ರೀಸಾಯಣಾಚಾರ್ಯರೂ ಈ ಲೋಕಶಬ್ದಕ್ಕೆ "ಲೋಕ್ಯತೇಅನುಭೂಯತೇ ಜನ್ಮಾಂತರಕೃತಧರ್ಮಾಧರ್ಮಫಲಂ ಸುಖದುಃಖಾತ್ಮಕಂ ಅಸ್ಮಿನ್ ಇತಿ ಲೋಕಃ" ಎಂದು ಹೇಳುತ್ತಾರೆ.

ಈ ಮಂತ್ರದಿಂದ ನಿಯೋಗಧರ್ಮವುಸ್ಥಾಪಿತವಾಗಿದೆ. 'ಪುನರ್ಭೂರ್ವಾಪರಃ ಪತಿಃ,, ಎಂದಿರುವುದರಿಂದ ವಿಧವೆಗೆ ನಿಯೋಗದಿಂದ ಎರಡನೆಯ ಪತಿಯಾದ ವಿಧುರನು ಎಂದರ್ಥವಾಗುವುದು. ವಿಧುರರು ಕನ್ಯೆಯರನ್ನು ಮದುವೆಮಾಡಿಕೊಳ್ಳುತ್ತಿರುವುದನ್ನು ಈ ವೇದವಚನವೂ ನಿಷೇಧಿಸುವುದು.

[೫] ಇಯಂನಾರೀಪತಿ ಲೋಕಂವೃಣಾನಾನಿಪದ್ಯತ ಉಪತ್ವಾ ಮರ್ತ್ಯಪ್ರೇತಂ । ಧರ್ಮಂ ಪುರಾಣಮನುಪಾಲಯಂತೀ ತಸ್ಯೈಪ್ರಜಾಂ ದ್ರವಿಣಂ ಚೇಹಧೇಹಿ ॥

[ಅಥರ್ವಣ, ಕಾಂ, ೧೮, ಅನು ೩, ವ ೧, ಮಂ, ೧]

ಶ್ರೀಮದ್ದಯಾನಂದ ಸರಸ್ವತಿಗಳ ಭಾಷ್ಯ-ಇಯಂನಾರೀ ಇಯಂ ವಿಧವಾನಾರೀ [ಪ್ರೇತಂ] ಮೃತಂಪತಿಂ ವಿಹಾಯ [ಪತಿಲೋಕಂ] ಪತಿ ಸುಖಂ [ವೃಣಾನಾ] ಸ್ವೀಕರ್ತುಮಿಚ್ಛಂತೀಸತೀ [ಮರ್ತ್ಯ] ಹೇಮನುಷ್ಯ(ತ್ವಾಮುಪನಿಪದ್ಯತೇ) ತ್ವಾಂಪತಿಂ ಪ್ರಾಪ್ನೋತಿ ತವಸಮೀಪಂ ನಿಯೋಗವಿಧಾನೇನಾ ಗಚ್ಛತಿ। ತಾಂ ತ್ವಂಗೃಹಾಣಾಽಸ್ಯಾಂ ಸಂತಾನಾನ್ಯುತ್ಪಾದಯ । ಕಥಂಭೂತಾಸಾ । ಧರ್ಮಂಪುರಾಣಂ ವೇದಪ್ರತಿಪಾದ್ಯಂ ಸನಾತನಂ ಧರ್ಮಮನುಪಾಲಯಂತೀ ಸತೀ ತ್ವಾಂನಿಯೋಗೇನ

ಪತಿಂವೃಣುತೇ । ತ್ವಮಪೀಮಾಂ ವೃಣು (ತಸ್ಯೈ) ವಿಧವಾಯೈ(ಇಹ) ಅಸ್ಮಿನ್ ಸಮಯೇ ಲೋಕೇವಾ (ಪ್ರಜಾಂಧೇಹಿ) ತ್ವಮಸ್ಯಾಂ ಪ್ರಜೋತ್ಪತ್ತಿಂಕುರು (ದ್ರವಿಣಂ) ದ್ರವ್ಯಂ ವೀರ್ಯಂ ಚ ಅಸ್ಯಾಂಧೇಹಿ । ಅರ್ಥಾರ್ತ್ ಗರ್ಭಾಧಾನಂಕುರು॥

ಭಾಷಾಂತರ-- ಈ ವಿಧವೆಯು ವೇದಪ್ರತಿಪಾದ್ಯವಾದ ಸಂತಾನೋತ್ಪತ್ತಿಧರ್ಮವನ್ನು ಪರಿಪಾಲಿಸುವವಳಾಗಿ, ತನ್ನ ಮೃತಪತಿಯನ್ನು ಬಿಟ್ಟು ಪತಿಸುಖವನ್ನು ಬಯಸುವವಳಾಗಿ ನಿನ್ನ ಸಮೀಪವನ್ನೈದಿರುವಳು. ಎಲೈ ಮಾನವನೇ ! ಎಂದರೆ ವಿಧುರನೆ, ಅವಳಲ್ಲಿ ನಿನ್ನ ದ್ರವ್ಯವನ್ನೂ ವೀರ್ಯವನ್ನೂ ಇಡುವವನಾಗಿ ಈ ಇಹಲೋಕದಲ್ಲಿ ಪ್ರಜೋತ್ಪಾದನೆಯನ್ನು ಮಾಡು.

ವಿಧವೆಯು ಸಂತಾನಾರ್ಥಿಯಾಗಿ ವಿಧುರನ ಸನ್ನಿಧಿಗೆ ಬಂದು ಬೇಡಿದರೆ ಆ ವಿಧುರನು ವಿಧವೆಯ ಪ್ರಾರ್ಥನೆಯನ್ನು ನೆರವೇರಿಸಬೇಕೆಂದು ಈ ವೇದಮಂತ್ರವು ವಿಧಿಸಿರುವುದು. ಬ್ರಹ್ಮಚರ್ಯವ್ರತವನ್ನೂ ಸಹಗಮನವನ್ನೂ ವಪನವನ್ನೂ ಈ ಮಂತ್ರವೂ ನಿಷೇಧಿಸುತ್ತದೆ.

(೭) ಉದೀರ್ಷ್ವನಾರ್ಯಭಿ ಜೀವಲೋಕಂಗತಾಸುಮೇತ ಮುಪಶೇಷಏಹಿ । ಹಸ್ತಗ್ರಾಭಸ್ಯ ದಿಧಿಷೋಸ್ತ್ವವೇದಂಪತ್ಯುರ್ಜನಿತ್ವಮಭಿಸಂಬಭೂಥ ॥

ಋಗ್ವೇದ ಮಂ ೧೦, ಸೂಕ್ತ ೧೮, ಮಂತ್ರ ೮

ಶ್ರೀಮದ್ದಯಾನಂದ ಸರಸ್ವತಿಗಳ ಭಾಷ್ಯ॥ (ಉದೀರ್ಷ್ವನಾರೀ) ಹೇವಿಧವೆ ! ನಾರೀ ! (ಏತಂ) (ಗತಾಸುಂ) ಗತಪ್ರಾಣಂ ವಿವಾಹಿತಪತಿಂತ್ಯಕ್ತ್ವಾ (ಅಭಿಜೀವಲೋಕಂ) ಜೀವಂತಂ ದೇವರಂ ದ್ವಿತೀಯವ

ರಂಪತಿಂ (ಏಹಿ) ಪ್ರಾಪ್ನುಹಿ (ಉಪಶೇಷೇ) ತಸ್ಯೈವ್ರೋಪಶೇಷೇ ಸಂತಾನೋತ್ಪಾದಯವರ್ತಸ್ವ । ತತ್ಸಂತಾನಂ । (ಹಸ್ತಗ್ರಾಭಸ್ಯ) ವಿವಾಹೇ ಸಂಗ್ರಹೀತ ಹಸ್ತಸ್ಯ ಪತ್ಯುಸ್ಸ್ಯೈತ್ । ಯದಿನಿಯುಕ್ತ ಪತ್ಯುರ್ಧರ್ಮೇ ನಿಯೋಗಃ ಕೃತಸ್ತರ್ಹಿ । (ದಿಧಿಷೋಃ) ತಸ್ಯೈವ ಸುತಾನಂಭವೇತ್ । [ತವೇದಂ] ಇದಮೇವ ವಿಧವಾಯಾಸ್ತವ [ಜನಿತ್ವಂ] ಸಂತಾನಂಭವತಿ । ಹೇವಿಧವೇ ವಿಗತವಿವಾಹಿತ ಸ್ತ್ರೀಕಸ್ಯ ಪತ್ಯುಶ್ಚೈತನ್ನಿಯೋಗಕರಣಾರ್ಥಂ [ಉದೀರ್ಷ್ವ] ವಿವಾಹಿತಪತಿಮರಣಾನಂತರ ಮಿಮಂ ನಿಯೋಗಮಿಚ್ಛತಥಾ । ಅಭಿಸಂಬಭೂಥ । ಸಂತಾನೋತ್ಪತ್ತಿಂ ಕೃತ್ವಾ ಸುಖಸಂಯುಕ್ತಾಭವ ॥

ಭಾಷಾಂತರ— ಎಲೆನಾರಿ ಗತಾಸುವಾದೀ ವಿವಾಹಿತ ಪತಿಯ ಆಸೆಯನ್ನು ಬಿಟ್ಟೇಳು ! ಜೀವ ವಂತನಾದ ದ್ವಿತೀಯ ಪತಿಯನ್ನು ಹೊಂದಿ ಸಂತಾನೋತ್ಪತ್ತಿಯನ್ನು ಮಾಡಿಕೊಂಡಿರು. ಹೀಗೆ ಹುಟ್ಟಿದ ಮಕ್ಕಳು ಪಾಣಿಗ್ರಹಣ ಮಾಡಿದ ಪತಿಯಿಂದ ಹುಟ್ಟಿದ ಮಕ್ಕಳಂತೆನಿನಗೂ ಆಗುವುವು; ಪತ್ನಿಯಿಂದಾದ ಮಕ್ಕಳಂತೆ ದಿಧಿಷುವಿಗೂ ಆಗುವುವು. ಸಂತಾನ ಕ್ಷಯವಾಗದಂತೆ ಮಾಡಿಕೊಂಡು ಸುಖಸಂಯುಕ್ತಳಾಗು.

ಈವೇದ ಮಂತ್ರದಲ್ಲಿರುವ ' ಉದೀರ್ಷ್ವ, ಅಭಿಸಂಬಭೂಥ' ಎಂಬುವು ವಿಧಿರೂಪದಲ್ಲಿವೆ. ಆದುದರಿಂದ ಮಕ್ಕಳಿಲ್ಲದ ವಿಧವೆಯರು ನಿಯೋಗದಿಂದ ಮಕ್ಕಳನ್ನು ಪಡೆದು ಸಂತಾನವನ್ನು ಳಿಸುವುದು ಅವರ ಕರ್ತವ್ಯ,, ಅದೇ ವೃಷ್ಣಿ, ದೇವೃ ಕಾಮಾ,, ಎಂಬಶಬ್ದಗಳು ಹಿಂದೆ ಕೊಟ್ಟಿರುವ ಅದೇವೃಘ್ನ್ಯಪತಿಘ್ನೀ ಎಂಬ ಮಂತ್ರದಲ್ಲಿರುವುದನ್ನು ಜ್ಞಾಪಿಸಿಕೊಳ್ಳಬೇಕು,

ಆಸ್ತಿಕ ಶಿಖಾಮಣಿಗಳಿಗೆಲ್ಲಾ ನಿಯೋಗ ವಿಧಿಯುಸದಾಚಾರ ವಾಗಿದೆ. ವಿಧವೆಯರಿಗೆ ತಲೆಯನ್ನುಬೋಳಿಸಿ ನಿಯೋಗವನ್ನು ನಿಷೇಧಿಸಿರುವುದು ವೇದವಿರುದ್ಧವಾದ ದುರಾಚಾರವಾಗಿದೆ. ಈದುರಾಚಾರವನ್ನು ಸ್ಥಾಪಿಸಿದವರು ಮುಸಲ್ಮಾನರ ಹಾವಳಿಯ ಕಾಲದ ನವೀನ ವಿದ್ವಾಂಸರಲ್ಲವೆ?ಅಲ್ಲವೆನ್ನುವುದಕ್ಕೆತಕ್ಕ ಆಧಾರಗಳಾವುವೂ ನಮಗೆಸಿಕ್ಕಿಲ್ಲ.

ಶ್ರುತಿ ವಿರುದ್ಧವಾದ ಪರಾಶರ ಸ್ಮೃತಿಯು ಏನೇನನ್ನುಹೇಳಿದರೂ ನಿಯೋಗ ಧರ್ಮವನ್ನು ತಿರಸ್ಕರಿಸಲಾಗುವುದಿಲ್ಲ, ಏಕೆಂದರೆಪ್ರನರ್ವಿವಾಹಕ್ಕೆ ಮಂತ್ರಗಳೇ ಇಲ್ಲ. ಮಹಾಭಾರತವಲ್ಲಿಯೂ ನಿಯೋಗ ವಿಧಿಗೆ ಬೇಕಾದಷ್ಟು ಆಧಾರಗಳು ಸಿಕ್ಕುತ್ತವೆ,ಒಂದಾಧಾರವನ್ನು ಕೊಡುತ್ತೇವೆ.

B. ಮಹಾ ಭಾರತದ ಆಧಾರ.

ಶೃಣು ಕುಂತಿ ಕಥಾ ಮೇತಾಂಶಾರದಾಂ ಡಾಯಿನೀಂಪ್ರತಿ.
ಸಾವೀರ ಪತ್ನೀ ಗುರುಣಾ ನಿಯುಕ್ತಾ ಪುತ್ರಜನ್ಮನಿ,

ಪುಷ್ಪೇಣ ಪ್ರಯತಾ ಸ್ನಾತಾನಿಶಿಕುಂತಿಚತುಷ್ಪಥೇ।ವರಯಿತ್ವಾದ್ವಿಜಂಸಿದ್ಧಂಹುತ್ವಾಪುಂಸವನೇಽನಲಿಂ| ಕರ್ಮಣ್ಯವಸಿತೇತಸ್ಮಿನ್ ಸಾತೇ ನೈವಸಾಹಾಽವಸತ್। ತತ್ರುತ್ರೀನ್ ಜನಯಾಮಾಸ ದುರ್ಜಯಾದೀನ್ಮಹಾ ರಥಾನ್॥

ತಥಾತ್ವಮಪಿ ಕಲ್ಯಾಣೀ ಬ್ರಾಹ್ಮಣಾತ್ತಾಪಸಾಧಿಕಾತ್
ಮನ್ನಿ ಯೋಗಾದ್ಯತ ಕ್ಷಿ ಪ್ರಮಪತ್ಯೋತ್ಪಾದನಂಪ್ರತಿ
(ಆದಿಪರ್ವ-ಅ೧೨೦. ಶ್ಲೋ:೩೭-೪೦)

ಭಾಷಾಂತರ-ಎಲೈ ಕುಂತಿಯೇ ಈಕಥೆಯನ್ನುಕೇಳು ಶಾರದಾಂಡಾಯಿನಿ ಎಂಬ ವೀರಪತ್ನಿಯುಗುರುವಿನಆಜ್ಞೆಯ

ಪ್ರಕಾರ ನಿಯೋಗಕ್ರಮದಿಂದ ಪುತ್ರರನ್ನು ಪಡೆದಳು.ಋತು ಸ್ನಾನವಾದ ದಿವಸ ಎಲೈ ಕುಂತಿಯೇ, ಚತುಷ್ಪಥಗಳು ಕೂ ಡುವ ಚೌಕದಲ್ಲಿ, ರಾತ್ರಿಯಲ್ಲಿ ಕಾದುಕೊಂಡಿದ್ದು ದ್ವಿಜಸಿದ್ಧ ನೊಬ್ಬನನ್ನು ಹುಡುಕಿ, ಅವನೊಡನೆ ನಿಯೋಗವನ್ನು ಮಾಡಿ ಕೊಂಡಳು, ಗಂಡುಮಕ್ಕಳಾಗಬೇಕೆಂದು ಅಗ್ನಿಯಲ್ಲಿ ಹೋ ಮ ಮಾಡಿದವಳಾಗಿ ಆಸಿದ್ಧ ಪುರುಷನೊಡನೆ ವಾಸವಾಗಿದ್ದಳು. ದುರ್ಜಯರಾಗಿಯೂಮಹಾರಥಿಗಳಾಗಿಯೂ ಆಗುವ ಮೂರು ಮಂದಿ ಮಕ್ಕಳನ್ನು ಆಸಿದ್ಧ ಪುರುಷನಿಂದ ಪಡೆದು ಸಂತಾನ ವನ್ನುಳಿಸಿದಳು. ಹಾಗೆಯೇ,ಎಲೈ ಕಲ್ಯಾಣಿಯೇ, ತಾಪಸಾಧಿ ಕನಾಗಿರುವ ಬ್ರಾಹ್ಮಣೋತ್ತಮನಿಂದ ನನ್ನಾಜ್ಞೆಯ ಪ್ರ ಕಾರ ಬೇಗನೆ ನೀನು ಪುತ್ರೋತ್ಪಾದನೆಯನ್ನು ಮಾಡಿಕೊಂ ಡು ವಂಶವನ್ನುಳಿಸುವವಳಾಗು.

ಕ್ಷತ್ರಿಯಸ್ತ್ರೀಯರಿಗೆ ಈ ವಿಧಿಯನ್ನು ಹೇಳಿದೆ, ಬ್ರಾಹ್ಮಣಸ್ತ್ರೀ ಯರಿಗಲ್ಲ,, ಎಂದು ನವೀನವಿದ್ವಾಂಸರೂ ಮಠಾಧಿಪತಿಗಳಲ್ಲಿ ಕೆಲವರು ಆಕ್ಷೇಪಣೆಯನ್ನು ಮಾಡಬಹುದು. ಈಮಹರ್ಷಿಯರು ಕ್ಷತ್ರಿಯರಿಗೊಂ ದು ವೇದವನ್ನೂ ಬ್ರಾಹ್ಮಣರಿಗೆ ಬೇರೊಂದು ವೇದವನ್ನೂ ತಂದಾಗ ನಾವೂ ಬ್ರಾಹ್ಮಣರಿಗೆಬೇರೊಂದುಶಾಸ್ತ್ರವನ್ನು ತಂದುಕೊಡುವೆವು.ಹಾಗೆ ತರುವುದಕ್ಕೆ ಮೊದಲು ವಿಧವೆಯರಿಗೆ ಪುಂಸವನ ಹೋಮವನ್ನು ಪವಿ ತ್ರಾಗ್ನಿಯಲ್ಲಿ ಮಾಡುವುದಕ್ಕೆ ಅಧಿಕಾರವುಂಟೆಂಬುವದನ್ನು ಬರೆದಿಟ್ಟು ಕೊಳ್ಳಲಿ.

ಮನುಸ್ಮೃತಿಯನ್ನು ಬರೆದ ಕ್ರಿ. ಶ. ನಾಲ್ಕನೆಯ ಶತಮಾನದ ಆದಿಯಲ್ಲಿಯೂ ನಿಯೋಗವಿಧಿಯೂ ಆಚರಣೆಯ

ಲ್ಲಿತ್ತು. ಸಹಗಮನವೇ ಆಗಲಿ ವಿಧವಾ ವಪನವೇ ಆಗಲಿ ಬ್ರಹ್ಮಚರ್ಯವ್ರತವೇ ಆಗಲಿ ಆಚರಣೆಗೆ ಬಂದಿರಲಿಲ್ಲ.

C. ಮನುಸ್ಮೃತಿಯ ಆಧಾರ.

ದೇವರಾದ್ವಾಸಪಿಂಡಾದ್ವಾಸ್ತ್ರೀಯಾ ಸಮ್ಯಙ್ನಿಯುಕ್ತಯಾ ।
ಪ್ರಜೇಪ್ಸಿತಾಽಧಿಗಂತವ್ಯಾ ಸಂತಾನಸ್ಯ ಪರಿಕ್ಷಯೇ ॥

[ಅಧ್ಯಾಯ ೯, ಶ್ಲೋಕ ೫೯]

ಭಾಷಾಂತರ- ದೇವರನೊಡನೆಯಾಗಲಿ ಸಪಿಂಡನೊಡನೆಯಾಗಲಿ ಸ್ತ್ರೀಯು, ಸಂತಾನಕ್ಷಯವಾಗುವ ಪಕ್ಷಕ್ಕೆ ನಿಯೋಗವನ್ನು ಮಾಡಿಕೊಂಡು ಮಕ್ಕಳನ್ನು ಪಡೆಯಲಿ.

ದೇವರನೆಂದರೆ ದ್ವಿತೀಯವರ ಅಥವಾ ವಿಧುರನಾದ ವರ ಎಂಬ ಅರ್ಥವನ್ನು ಮರೆಯದಿರಬೇಕು. ವಿಧವಾವಿಧುರರೇ ಪರಸ್ಪರವಾಗಿ ನಿಯೋಗವನ್ನು ಮಾಡಿಕೊಳ್ಳಬೇಕು. ನವೀನವಿದ್ವಾಂಸರುಗಳು ರಚಿಸಿರುವ ಪರಾಶರಾದಿಸ್ಮೃತಿಗಳನ್ನು ನಂಬಿದರೆ ಲೋಕವು ಕೆಡುವುದರಲ್ಲಿ ಸಂಶಯವಿಲ್ಲ. ವಿಧವೆಯರಿಗೆ ಬ್ರಹ್ಮಚರ್ಯವನ್ನೇ ಆಗಲಿ, ಸಹಗಮನವನ್ನೇ ಆಗಲಿ ವಪನವನ್ನೇ ಆಗಲಿ, ವೇದವು ವಿಧಿಸುವುದಿಲ್ಲ.

ಸುಮಾರು ೬೦೦ ವರುಷಗಳ ಹಿಂದೆ ಬಾಳಿದ ಶ್ರೀ ಸಾಯನಾಚಾರ್ಯರೂ ನಿಯೋಗವಿಧಿಯನ್ನು ತಿರಸ್ಕರಿಸಲಾರದೆ ರೂಪಾಂತರದಲ್ಲಿ ಅನುಮೋದಿಸಿರುತ್ತಾರೆ.

D. ಶ್ರೀ ಸಾಯನಾಚಾರ್ಯರ ಭಾಷ್ಯದ ಆಧಾರ:—

(೧) ವೇದಮಂತ್ರ- ಇಯಂ ನಾರೀಪತಿಲೋಕಂ ವೃಣಾನಾನಿ ಪದ್ಯತ ಉಪತ್ವಾ ಮರ್ತ್ಯಪ್ರೇತಂ । ವಿಶ್ವಂ ಪುರಾಣ ಮನುಪಾಲಯಂತೀ ತಸ್ಯೈಪ್ರಜಾಂದ್ರವಿಣಂ ಚೇಹಧೇಹಿ ॥

[ತೈತ್ತಿರೀ ಯಾರಣ್ಯಕ ಪ್ರಪಾ ೬, ಅನು ೧, ಮಂ ೧೩]

ಶ್ರೀ ಸಾಯನಾಚಾರ್ಯರ ಭಾಷ್ಯ—ಹೇ (ಮರ್ತ್ಯ)ಮನುಷ್ಯಯಾ

(ನಾರೀ) ಮೃತಸ್ಯತವಭಾರ್ಯಾಸಾ(ಪತಿಲೋಕಂ)(ವೃಣಾನಾ) ಕಾಮಯ ಮಾನಾ (ಪ್ರೇತಂ) ಮೃತಂತ್ವಾಂ (ಉಪನಿಪದ್ಯತೇ) ಸಮೀಪೇನಿತರಾಂ ಪ್ರಾಪ್ನೋತಿ ಕೀದೃಶೀ (ಪುರಾಣಂ ಪಿಶ್ವಂ) ಅನಾದಿಕಾಲಪ್ರವೃತ್ತಂ ಕೃತ್ಸ್ನಂ ಸ್ತ್ರೀಧರ್ಮಂ ಅನುಕ್ರಮೇಣ (ಪಾಲಯಂತೀ)ಪತಿವ್ರತಾನಾಂ ಸ್ತ್ರೀಣಾಂಪತ್ಯಾ ಸಹೈವವಾಸಃ ಪರಮೋಧರ್ಮಃ ತಸ್ಯೈ ಧರ್ಮಪತ್ನ್ಯೈ ತ್ವಂ ಇಹ ಲೋಕೇನಿವಾಸಾರ್ಥಮನುಜ್ಞಾಂ ದತ್ವಾ(ಪ್ರಜಾಂ) ಪೂರ್ವಂ ವಿದ್ಯಮಾನಾಂ ಪುತ್ರಾದಿಕಂ ದ್ರವಿಣಂ ಧನಂಚ (ಧೇಹಿ) ಸಂಪಾದಯ ಅನುಜಾನೀಹೀತ್ಯರ್ಥಃ ॥

ಶ್ರೀ ಸಾಯನ ಭಾಷ್ಯಾನುಗುಣವಾದ ಭಾಷಾಂತರ॥ ಎಲೈ ಮರ್ತ್ಯನೇ ಪ್ರೇತನಾಗಿರುವ ನಿನ್ನ ಭಾರ್ಯೆಯು ನಿನ್ನ ಪ್ರೇತಲೋಕವನ್ನೇ ಕಾಮಿಸುವವಳಾಗಿ ಪ್ರೇತಸ್ವರೂಪಿಯಾದ ನಿನ್ನ ಸಮೀಪವನ್ನೈದಿರುವಳು. ಪತಿವ್ರತಾ ಸ್ತ್ರೀಯರಿಗೆ ಪತಿಯೊಡನೆ ವಾಸಮಾಡುವುದೇ ಪರಮಧರ್ಮವೆಂಬ ಅನಾದಿಕಾಲ ಪ್ರವೃತ್ತವಾದ ಸ್ತ್ರೀಧರ್ಮವನ್ನು ಪರಿಪಾಲಿಸುವವಳಾಗಿರುವಳು. ಈ ನಿನ್ನ ಧರ್ಮಪತ್ನಿಗೆ ಇಹಲೋಕದಲ್ಲಿಯೇ ಉಳಿದಿರುವಂತೆ ಆಜ್ಞೆಯನ್ನು ಕೊಟ್ಟು ನೀನು ಸಾಯುವುದಕ್ಕೆ ಮೊದಲು ಸಂಪಾದಿಸಿದ ಪುತ್ರಾದಿಗಳನ್ನೂ ಧನವನ್ನೂ ಅವಳಿಗೆ ಸಂಪಾದಿಸಿಕೊಡು.

ಹಿಂದೆ ಕೊಟ್ಟಿರುವಂತೆ ಭಾಷ್ಯವನ್ನು ಶ್ರೀ ಸಾಯನಾಚಾರ್ಯರು ಬರೆದರೆಂದು ನಂಬುವುದು ನಮಗೆ ಸಾಧ್ಯವಲ್ಲವಾಗಿದೆ, ಏಕೆಂದರೆ ಈ ಭಾಷ್ಯದಲ್ಲಿ ಮೂರು ಮಹಾದೋಷಗಳಿರುವುವು. ಯಾವುವೆಂದರೆ—

(a) ಹೇಮರ್ತ್ಯ ಎಂದು ಸಂಬೋಧಿಸಿ ಹೇಳಿ „ವ್ಯತಂತ್ವಾಂ „ ಎಂದು ಹೇಳಿರುವುದರಿಂದ „ಹೇಮರ್ತ್ಯ„ ಎಂದರೆ „ ಹೇಪ್ರೇತ„ ಎಂದು ಅರ್ಥಮಾಡಿಕೊಳ್ಳಬೇಕಾಗಿದೆ ಸತ್ತಿರುವವನನ್ನು ಸಾಯದಿರುವವನಂತೆ ಸಂಬೋಧಿಸಿರುವುದು ಮಹಾದೋಷ. ಪ್ರೇತನನ್ನು ಮರ್ತ್ಯಎಂದು ಸಂಬೋಧಿಸಲೇಕೂಡದು. ಸ್ಕೂಲಿನ ಹುಡುಗರೂ ಇಂತಹ ತಪ್ಪನ್ನು ಮಾಡುವುದಿಲ್ಲ.

(b) „ಪತಿವ್ರತಾನಾಂ ಸ್ತ್ರೀಣಾಂ ಪತ್ಯಾ ಸಹೈವವಾಸಃ ಪರಮೋಧರ್ಮಃ„ ಎಂಬ ವಚನವು ಇಹಲೋಕವಾಸಕ್ಕೆ ಸಂಬಂಧಪಡುವುದೇ ಹೊರತು ಪ್ರೇತಪಿತೃಲೋಕಗಳ ವಾಸಕ್ಕೆ ಸಂಬಂಧಪಡುವುದಿಲ್ಲ. ಸಖ್ಯಾತ್ತೇಮಾಯೋಷಗ್ಂ । ಸಖ್ಯಾನ್ಮೇಮಾಯೋಷ್ಠಾಃ ॥ ನಿನ್ನನಗಲಿ ನಾನಿನ್ನಿರಲಾಗದು, ನನ್ನನಗಲಿ ನೀನಿನ್ನಿರಬೇಡ ಎಂಬುದನ್ನು ಪ್ರೇತಪಿತೃಲೋಕಗಳ ವಾಸಕ್ಕೂ ಅನ್ವಯಿಸುವುದಾದರೆ, ಹೆಂಡತಿ ಸತ್ತಾಗ ಗಂಡನೂ ಸಹ ಸಹಗಮನವನ್ನು ಮಾಡಬೇಕಾಗುವುದು. ಹೀಗೆ ಮಾಡುವುದಕ್ಕೆ ನವೀನವಿದ್ವಾಂಸರುಸಿದ್ಧರಾಗಿರುವರೆ? ಸಹಗಮನವು ವೇದವಿರುದ್ಧವೆಂದು ಹಿಂದೆಯೇ ತೋರಿಸಿದೇವೆ.

(c)ಪ್ರಜಾಂಧೇಹಿ ಎಂದರೆಪ್ರಜೋತ್ಪತ್ತಿಂಕುರುಎಂದರ್ಥ. ಪೂರ್ವಂವಿದ್ಯ ಮಾನಾಂಪುತ್ರಾದಿಕಂಧೇಹಿ ಎನ್ನುವುದರಲ್ಲಿ ಅರ್ಥಸಾಮಂಜಸ್ಯವೇ ಇಲ್ಲ,ಪದವ್ಯುತ್ಪತ್ತಿಯೇ ಇಲ್ಲ. ಸಂಪಾದಿಸಿರುವುದನ್ನು ಸಂಪಾದಿಸುವುದುಹೇಗೆ ?

ಈಮೂರು ಕಾರಣಗಳಿಗೋಸ್ಕರ ಈಭಾಷ್ಯ ವನ್ನು

ತಿರಸ್ಕರಿಸಬೇಕಾಗಿದೆ,ಮತ್ತು ಮಹನೀಯರಾದ ಶ್ರೀಸಾಯ ನಾಚಾರ್ಯರು ಇದನ್ನು ಬರಿಯಲಿಲ್ಲವೆನ್ನಬೇಕಾಗಿದೆ. ಈಮಂತ್ರದ ನಿಜವಾದರ್ಥವೇನಂದರೆ-ಈ ವಿಧವೆಯು ವೇದಪ್ರತಿಪಾದ್ಯವಾದ ಸಂತಾನೋತ್ಪತ್ತಿ ಧರ್ಮವನ್ನು ಪರಿಪಾಲಿಸುವುದಕ್ಕಾಗಿ ತನ್ನ ಮೃತಪತಿಯನ್ನು ಬಿಟ್ಟು,ಪತಿಸುಖವನ್ನು ಬಯಸುವಳಾಗಿ ನಿನ್ನ ಸಮೀಪವನ್ನೈದಿರುವಳು, ಎಲೈ ಮಾನವನೇ ಎಂದರೆ ವಿಧುರನೇ,ಅವಳಲ್ಲಿ ನಿನ್ನ ದ್ರವ್ಯವನ್ನೂ ಐಶ್ವರ್ಯವನ್ನೂ ಇಡುವವನಾಗು. ಈ ಇಹಲೋಕದಲ್ಲಿಅವಳಲ್ಲಿ ಪ್ರಜೋತ್ಪಾದನೆಯನ್ನು ಮಾಡು.

(2)ವೇದಮಂತ್ರ॥ಉದೀರ್ಷ್ವ ನಾರ್ಯಭಿಜೀವಲೋಕಮಿತಾಸುಮೇತಮುಪಶೇಷಏಹಿ। ಹಸ್ತಗ್ರಾಭಸ್ಯದಿಧಿಷೋಸ್ತ್ವಮೇತತ್ಪತ್ಯುರ್ಜನಿತ್ವಮಭಿ ಸಂಬಭೂಥ॥

ತೈತ್ತಿರೀಯಾರಣ್ಯಕ, ಪ್ರಪಾಠ ೬ ಅನುವಾಕ ೧॥ ಶ್ರೀಸಾಯನಾಚಾರ್ಯರಭಾಷ್ಯ॥ ಹೇನಾರಿ ತ್ವಂ ಇತಾಸುಂಗತಪ್ರಾಣಂ(ಏತಂ) ಪತಿಂ ಉಪಶೇಷೇ, ಉಪೇತ್ಯ ಶಯನಂ ಕರೋಷಿ(ಉದೀರ್ಷ್ವ, ಅಸ್ಮಾತ್ ಪತಿಸಮೀಪಾತ್ ಉತ್ತಿಷ್ಠ (ಜೀವಲೋಕಮಭಿ) ಜೀವಂತಂ ಪ್ರಾಣಿಸಮೂಹಮಭಿಲಕ್ಷ್ಯ(ಏಹಿ)ಆಗಚ್ಛ ತ್ವಂಹಸ್ತಗ್ರಾಭಸ್ಯ ಪಾಣಿಗ್ರಾಹವತಃ ದಿಧಿಷೋಃ ಪುನರ್ವಿವಾಹೇಚ್ಛೋಃ ಪತ್ಯುಃಏತತ್ ಜನಿತ್ವಂಜಾಯಾತ್ವಂ ಅಭಿಸಂಬಭೂವ ಅಭಿಮುಖ್ಯೇನ ಸಮ್ಯಕ್ ಪ್ರಾಪ್ನುಹಿ॥

ಶ್ರೀಸಾಯನಾಚಾರ್ಯರ ಭಾಷ್ಯಕ್ಕನುಗುಣವಾದ ಭಾಷಾಂತರ॥ ಎಲೆನಾರಿ,ಪ್ರಾಣವನ್ನು ಕಳೆದುಕೊಂಡಿರುವ ಈ ಪತಿಯ ಸಮೀಪದಲ್ಲಿ ಬಿದ್ದಿದ್ದೀಯೆ;ಮೇಲಕ್ಕೇಳು; ಜೀವಿಸುವ ಪ್ರಾಣಿ ಸಮೂಹದಕಡೆ ದೃಷ್ಟಿಯನ್ನಿಟ್ಟು ಬರುವವಳಾಗು,ಪು

ನರ್ವಿವಾಹದಲ್ಲಿಚ್ಛೆಯುಳ್ಳವನಾಗಿ ನಿನ್ನ ಪಾಣಿಗ್ರಹಣಮಾಡು ವೀತನಜಾಯೆಯಾಗಿ ಅವನೊಡನೆ ಸುಖಾನು ಭವವನ್ನು ಮಾಡುವಳಾಗು.

ನಿಯೋಗವಿಧಿಯು ವೇದಪ್ರತಿಪಾದ್ಯವಾಗಿದೆ. ಮಹಾಭಾರತದ ಕಾಲದಲ್ಲಿಯೂ ಆಚರಣೆಯಲ್ಲಿತ್ತು; ಮನುಸ್ಮೃತಿಯ ಕಾಲದಲ್ಲಿಯೂ ಆಚರಣೆಯಲ್ಲಿತ್ತು; ಮುಸಲ್ಮಾನರ ಹಾವಳಿಯ ಕಾಲದಲ್ಲಿ ಆಚರಣೆಯು ನಿಂತುಹೋದರೂ ಮಂತ್ರಗಳನ್ನು ಹೇಳುವದು ನಿಲ್ಲಲಿಲ್ಲ, ಈಗಲೂ ನಿಂತಿಲ್ಲ. ಈ ವಿಷಯವನ್ನು ಶ್ರೀಮಠಾಧಿ ಪತಿಗಳೂ ಒಪ್ಪಲೇ ಬೇಕಾಗಿದೆ, ಅನುಷ್ಠೇಯಾರ್ಥ ಸ್ಮಾರಕೋ ಮಂತ್ರಃ ಎಂಬುದಿದೆ.

ಶ್ರೀ ಸಾಯಣಾ ಚಾರ್ಯರ ಭಾಷ್ಯದ ಪ್ರಕಾರ ವಿಧವೆಯರಿಗೆ ವೇದಮಂತ್ರ ಸಹಿತವಾಗಿ ಪುನರ್ವಿವಾಹವನ್ನು ಮಾಡಬಹುದೆಂದು ತೋರಬರುತ್ತದೆ. ಆದರೆ ಇದು ವೇದಸಮ್ಮತವಲ್ಲ. ವಿಧವೇವ ದೇವರಂ ಎಂಬುದಕ್ಕೆ ವಿರುದ್ಧ; ವಿಧುರವಿಧವಾಗ್ನಿಗಳನ್ನು ಸಂಸರ್ಗಿಸುವುದಕ್ಕೆ ಮಂತ್ರವೇ ಇಲ್ಲ. ಗೃಭ್ಣಾಮಿತೇಸೌಪ್ರಜಾಸ್ತ್ವಾಯ ಹಸ್ತಂ ಎಂಬ ವೇದಮಂತ್ರವನ್ನು ಸತ್ಯಚ್ಯುತನಾಗದೆ ವಿಧುರನೇ ಆಗಲಿ ಸತ್ಯಚ್ಯುತಳಾಗದೆ ವಿಧವೆಯೇ ಆಗಲಿ ಹೇಳುವುದಕ್ಕಾಗುವುದಿಲ್ಲ, ಸೂತ್ರಕಾರರಾರೂ ಪುನರ್ವಿವಾಹಕ್ಕೆ ಮಂತ್ರವನ್ನು ಕೊಟ್ಟಿಲ್ಲ ಮಹಾಭಾರತಮನುಸ್ಮೃತ್ಯಾದಿಗಳಿಗೆ ವಿರುದ್ಧ -ವ್ಲೋಲಂಭಭಯಗ್ರಸ್ತರಾಗಿ ನಿಯೋಗವನ್ನು ತಿರಸ್ಕರಿಸಿ ಶ್ರೀಸಾಯಣರು ಮೋಸ ಹೋದರೆನ್ನಬೇಕಾಗಿದೆ. ಪುನರ್ವಿವಾಹದ ಹೆಂಡತಿಯೆನ್ನಬೇಕಾಯಿತು. ನಿಯೋಗದ

ಹೆಂಡತಿ ಎಂಬುದನ್ನು ಬಿಡಬೇಕಾಯಿತು.

ಶ್ರೀಸಾಯನಾಚಾರ್ಯರಭಾಷ್ಯಕ್ಕಿಂತಶ್ರೀಮದ್ದಯಾನಂದ ಸರಸ್ವತಿಗಳ ವೇದಭಾಷ್ಯವು ಉತ್ಕೃಷ್ಟವಾಗಿರುವುದನ್ನು ಬಹುಮಂದಿ ವಿದ್ವಾಂಸರುಒಪ್ಪಿರುತ್ತಾರೆ. ವಿಧವೇವ ದೇವರಂ ಎಂಬುದು ವೇದವಚನ. ವಿಧುರರಿಗೆ ವಿಧವೆಯರೇಗತಿ, ವಿಧವೆಯರಿಗೆ ವಿಧುರರೇಗತಿ ಎಂಬುದನ್ನುಶ್ರೀಸಾಯನಾಚಾರ್ಯರೂ ಹೇಳಿರುವರು. ವಿಧುರರುಕನ್ಯೆಯರನ್ನು ಮದುವೆಮಾಡಿಕೊಳ್ಳುತ್ತಿರುವುದು ವೇದವಿರುದ್ಧಾಚಾರವಾಗಿರುವುದಲ್ಲದೆ ಲೋಕಕ್ಕೆಹಾನಿಯನ್ನುಂಟುಮಾಡುವ ದುರಾಚಾರ ವಾಗಿಯೂಇದೆ.

ಈದುರಾಚಾರವನ್ನುನಿಲ್ಲಿಸುವುದು ಶ್ರೀಮಠಾಧಿಪತಿಗಳ ಮೊದಲನೆಯ ಕರ್ತವ್ಯವಲ್ಲವೆ?ಹಾಗೆಮಾಡದಿದ್ದರೆ ವೇದಮಾರ್ಗ ಪ್ರತಿಷ್ಠಾಪನಾಚಾರ್ಯರೆಂಬ ಬಿರುದು ಔಪಚಾರಿಕವಾಗುವುದು.



## IV. ನಿಯೋಗದ ಪ್ರಭೇದಗಳು.

ನಿಯೋಗದ ಪ್ರಭೇದಗಳನ್ನು ವಿಚಾರ ಮಾಡುವುದಕ್ಕೆ ಮೊದಲು ವಿವಾಹಕ್ಕೂ ನಿಯೋಗಕ್ಕೂ ಇರುವ ತಾರತಮ್ಯವನ್ನು ಸ್ಪಷ್ಟವಾಗಿ ತಿಳಿಯುವುದು ಆವಶ್ಯಕವಾಗಿದೆ. ಪಾಣಿಗ್ರಹಣದ ಮಂತ್ರದಿಂದಲೂ ಸಪ್ತಪದ ಪ್ರಾರ್ಥನೆಯ ಮಂತ್ರದಿಂದಲೂ ಅಗ್ನಿದ್ವಯ ಸಂಸರ್ಗದ ಮಂತ್ರದಿಂದಲೂ ವೈದಿಕ ವಿವಾಹದ ಲಕ್ಷಣಗಳು ಸ್ಪಷ್ಟ ಪಡುತ್ತವೆ, ಆ ಮಂತ್ರಗಳ ಮುಖ್ಯಮುಖ್ಯ ಭಾಗಗಳಾವುವೆಂದರೆ—

(a) ಪಾಣಿಗ್ರಹಣ-ಗೃಭ್ಣಾಮಿತೇ ಸುಪ್ರಜಾಸ್ತ್ವಾಯ ಹಸ್ತಂ ಮಯಾಪತ್ಯಾ ಜರದಷ್ಟಿರ್ಯಥಾ ಸಹ । ಭಗೋ ಅರ್ಯಮಾ ಸವಿತಾಪುರಂಧಿ ರ್ಮಹ್ಯಂ ತ್ವಾದು ಗಾರ್ಹಪತ್ಯಾಯದೇವಾಃ ॥

(b) ಸಪ್ತಪದ ಪ್ರಾರ್ಥನೆ-ಯಏತಿಪ್ರದಿಶಸ್ಸರ್ವಾದಿ ಶೋನುಪವಮಾನಃ । ಹಿರಣ್ಯಹಸ್ತ ಐರಮ್ಮಸ್ಸತ್ವಾ ಮನ್ಮನಸಂ ಕೃಣೋತು ॥

ಏಕಮಿಷೇ ದ್ವೇ ಊರ್ಜೇತ್ರೀಣಿ ವ್ರತಾಯ ಚತ್ವಾರಿ ಮಾಯೋಭವಾಯ ಪಂಚಪಶುಭ್ಯಃ ಷಡೃತುಭ್ಯಃ ಸಪ್ತಸಪ್ತಭ್ಯೋ ಹೋತ್ರಾಭ್ಯೋ ವಿಷ್ಣುಸ್ತ್ವಾನ್ವೇತು ॥

[c] ಅಗ್ನಿದ್ವಯ ಸಂಸರ್ಗ-ಸಖಾಸಪ್ತಪದಾಭವ, ಸಖಾಯೌ ಸಪ್ತಪದಾ ಬಭೂವ, ಸಖ್ಯಂತೇ ಗಮೇಯಗ್ಂ, ಸಖ್ಯಾತ್ತೇ ಮಾಯೋಷಗ್ಂ, ಸಖ್ಯಾನ್ಮೇಮಾಯೋಷ್ಟಾಃ ॥

ಸಮಿತಗ್ಂ ಸಂಕಲ್ಪೇಥಾಂ, ಸಂಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ ಇಷಮೂರ್ಜಮಭಿ ಸಂವಸಾನೌ, ಸಂವಾಂಮನಾಂಸಿ ಸಂವ್ರತಾ ಸಮುಚಿತ್ತಾನ್ಯಾಕರಂ ॥

ಈ ಮಂತ್ರಗಳ ಅರ್ಥನಿರ್ಣಯಕ್ಕೆ ವಿವಾಹದ ಮುಖ್ಯ

ತ್ರಮುಕರ್ವಾರ್ ವಿಚಾರವೆಂಬ ನಮ್ಮ ಸಣ್ಣ ಪುಸ್ತಕವನ್ನು ನೋಡಬಹುದು. ಈ ಮಂತ್ರಗಳಿಂದ ಮುಂದೆ ಹೇಳುವ ಲಕ್ಷಣಗಳು ಕಾಣಬರುವುವು. ಅವು ಯಾವುವೆಂದರೆ.

(೧) ಸಾತ್ವಿಕ ಪ್ರಜೋತ್ಪಾದನೆಯಾಗುವುದೊಂದು ;

(೨) ದೇಹಗಳಳಿವಾಗುವವರೆಗೂ ಪತಿಪತ್ನೀ ಸಂಬಂಧವಿರುವುದೊಂದು ;

(೩) ಪತಿ ಪತ್ನಿಯರು ಗಾರ್ಹಪತ್ಯಾಗ್ನಿ ಸೇವೆಯನ್ನು ಮಾಡುತ್ತಿರುವುದೊಂದು ;

(೪) ಸಪ್ತಪದಗಳಲ್ಲಿಯೂ ಪತಿಪತ್ನಿಯರು ಸಖರಾಗಿರುವುದೊಂದು ;

(೫) ಪತಿಪತ್ನಿಯರು ಇಹಲೋಕದಲ್ಲಿ ಒಬ್ಬರನ್ನೊಬ್ಬರು ಅಗಲದಿರುವುದೊಂದು;

(೬) ಪತಿಪತ್ನಿಯರ ಸಂಕಲ್ಪಗಳೂ ವ್ರತಗಳೂ ಚಿತ್ತಗಳೂ ಒಂದೇ ಆಗಿರುವುದೊಂದು;

ಈ ಆರೂ ವೈದಿಕ ವಿವಾಹದ ಲಕ್ಷಣಗಳಾಗಿರುತ್ತವೆ ವಿವಾಹಕ್ಕೂ ನಿಯೋಗಕ್ಕೂ ಮುಖ್ಯಗಳಾದ ಎರಡು ಭಾರತವ್ಯಗಳಿರುವುವು. ಅವುಯಾವುವೆಂದರೆ—

(a) ಸಂಶುದ್ಧವೀರ್ಯಯುಕ್ತರಾದ ವಧೂವರರಿಗೆ ಮಾತ್ರ ವೈದಿಕ ವಿವಾಹ ; ವಿಧವಾ ವಿಧುರರಿಗೆ ಮಾತ್ರ ನಿಯೋಗವಿಧಿ.

(b) ವೈದಿಕ ವಿವಾಹದಲ್ಲಿ ಅಗ್ನಿಸಂಸರ್ಗದಿಂದ ಗೃಹ್ಯಾಗ್ನಿಯು ಲಭಿಸುವುದು. ನಿಯೋಗದಲ್ಲಿ ಅಗ್ನಿ ಸಂಸರ್ಗ

ವಿಲ್ಲ, ಗೃಹ್ಯಾಗ್ನಿಯೂ ಲಭಿಸುವುದಿಲ್ಲ. ನಿಯೋಗವು ಲೌಕಿಕ ವಿವಾಹ. ವಿಧುರನಿಗೆ ವಿಧುರಾಗ್ನಿಯೇ ಉಳಿದಿರುವುದು, ವಿಧವೆಗೆ ವಿಧವಾಗ್ನಿಯೇ ಉಳಿದಿರುವುದು.

ಮೇಲೆ ಹೇಳಿರುವ ವೈದಿಕ ವಿವಾಹದ ಆರು ಲಕ್ಷಣಗಳಿಗೆ ಕೊರತೆಯುಂಟಾದ ಹಾಗೆಲ್ಲಾ ನಿಯೋಗದ ಪ್ರಭೇದಗಳು ಹುಟ್ಟುವುವು, ಅವುಗಳುಯಾವುವೆಂದರೆ-

(A) ಪ್ರಥಮ ಪ್ರಭೇದ-"ಕುಹಸ್ವಿದ್ದೋಷಾ ಕುಹವಸ್ತೋರಶ್ವಿನಾ ಕುಹಾಭಿ ಪಿತ್ವಂ ಕರತಃ ಕುಹೋಷತುಃ । ಕೋವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನಯೋಷಾ ಕೃಣುತೇ ಸಧಸ್ಥ ಆ॥" ಎಂಬ ವೇದಮಂತ್ರದಲ್ಲಿ ತೋರಬರುವ ಪ್ರಭೇದವು ಉತ್ತಮವಾದುದು. ಈ ಮಂತ್ರದ ಅರ್ಥಕ್ಕೆ ೨೯—೩೯ ನೆಯ ಪುಟಗಳನ್ನು ನೋಡಿರಿ. ಈ ಬಗೆಯ ನಿಯೋಗದಲ್ಲಿ ವಿಧವಾ ವಿಧುರರು ತಂತಮ್ಮ ಅಗ್ನಿಗಳನ್ನು ಸೇವಿಸಿಕೊಂಡಿರುವರು ಮತ್ತು ಯಾಗಗಳನ್ನು ಮಾಡುವುದಕ್ಕೆ ಯೋಗ್ಯತೆಯಿಲ್ಲ. ಒಬ್ಬರನ್ನೊಬ್ಬರು ಅಗಲದೆ ತಂತಮ್ಮ ಸ್ವತ್ತುಗಳನ್ನು ಸೇರಿಸಿಕೊಂಡು ಒಂದೇ ಮನೆಯಲ್ಲಿ ತಂತಮ್ಮ ಸಂಕಲ್ಪಗಳನ್ನೂ ವ್ರತಗಳನ್ನೂ ಚಿತ್ತಗಳನ್ನೂ ಸಾಧ್ಯವಾದ ಮಟ್ಟಿಗೂ ಒಟ್ಟುಗೂಡಿಸಿದವರಾಗಿ ಸಾತ್ವಿಕ ಪ್ರಜೋತ್ಪಾದನೆಯನ್ನು ಮಾಡಿಕೊಂಡು ಮಕ್ಕಳನ್ನು ಸಾಕುತ್ತಾ ಬಾಳುವರು. ಶ್ರೀ ಸಾಯನಾಚಾರ್ಯರು 'ಉದೀರ್ಷ್ವನಾರ್ಯಭಿ ಜೀವಲೋಕಂ' ಎಂಬ ಮಂತ್ರಕ್ಕೆ ಬರೆದಿರುವ ಭಾಷ್ಯದಲ್ಲಿ ಈ ಬಗೆಯ ನಿಯೋಗವನ್ನೇ ಮನಸ್ಸಿನಲ್ಲಿಟ್ಟುಕೊಂಡು ಮುಸಲ್ಮಾನರ ಹಾವಳಿಯ ಕಾಲವಾದುದರಿಂದ ಇದಕ್ಕೇ ಪುನರ್ವಿವಾಹವೆಂಬ ಹೆಸರನ್ನೂ ಕೊಟ್ಟಿರುವಂತೆ ತೋರುತ್ತದೆ. ಮಕ್ಕಳಿಲ್ಲದ ವಿಧವಾ ವಿಧುರರು ಈ ಬಗೆಯ ನಿಯೋಗವನ್ನು ಮಾಡಿಕೊಳ್ಳುವುದು ಸರ್ವೋತ್ತಮ. ವಿಧುರನು ತನ್ನ ವಿವಾಹಿತ ಪತ್ನಿಯ ಆಬ್ದಿಕ ಶ್ರಾದ್ಧವನ್ನು ತಾನು ಬದುಕಿರುವವರೆಗೂ ಮಾಡುತ್ತಿರುವನು. ವಿಧವೆಯೂ ತನ್ನ ವಿವಾಹಿತ ಪತಿಯ ಆಬ್ದಿಕ

ಶ್ರಾದ್ಧವನ್ನು ತಾನು ಬದುಕಿರುವವರೆಗೂ ಮಾಡುತ್ತಿರುವಳು. ನಿಯೋಗದಿಂದ ಹುಟ್ಟಿದ ಮಕ್ಕಳು ತಮ್ಮ ಜನನಿ ಜನಕರ ಶ್ರಾದ್ಧಗಳನು ಮಾಡುವರು. ವೈದಿಕ ವಿವಾಹದ ಮೂರನೆಯ ಲಕ್ಷಣ ಮಾತ್ರ ಈ ಬಗೆಯ ನಿಯೋಗದಲ್ಲಿಲ್ಲ; ಉಳಿದುವು ಇರುತ್ತವೆ.

(B) ದ್ವಿತೀಯ ಪ್ರಭೇದ-"ಉದೀರ್ಷ್ವನಾರ್ಯಭಿಜೀವಲೋಕಂ ಗತಾಸುಮೇತಮುಪಶೇಷ ಏಹಿ। ಹಸ್ತಗ್ರಾಭಸ್ಯ ದಿಧಿಷೋ ಸ್ತವೇದಂ ಪತ್ಯುರ್ಜನಿತ್ವ ಮಭಿಸಂಬಭೂಥ ॥" ಎಂಬ ವೇದಮಂತ್ರದಲ್ಲಿ ತೋರಬರುವ ಪ್ರಭೇದವು ಎರಡನೆಯದು. ಈ ಮಂತ್ರದ ಅರ್ಥಕ್ಕೆ ೩೭-೩೮ನೆಯ ಪುಟಗಳನ್ನು ನೋಡಿರಿ. ಈ ಬಗೆಯ ನಿಯೋಗದಲ್ಲಿ ನಿಯೋಗದ ದಂಪತಿಗಳು ತಂತಮ್ಮ ಸ್ವತ್ತು ಮುಂತಾದುವುಗಳನ್ನು ಬೇರೆ ಬೇರೆಯಾಗಿಯೇ ಇಟ್ಟುಕೊಂಡಿರುವರು, ಮತ್ತು ನಿಯೋಗದಿಂದ ಹುಟ್ಟಿದ ಮಕ್ಕಳನ್ನು ಹಂಚಿಕೊಳ್ಳುವರು. ವೈದಿಕ ವಿವಾಹದ ಆರು ಲಕ್ಷಣಗಳಲ್ಲಿ ಈ ಬಗೆಯ ನಿಯೋಗದ ದಾಂಪತ್ಯದಲ್ಲಿ ಮೂರನೆಯ ಮತ್ತು ನಾಲ್ಕನೆಯ ಮತ್ತು ಆರನೆಯ ಲಕ್ಷಣಗಳು ಇರುವುದಿಲ್ಲ, ಎಂದರೆ ಇವರು ಯಾಗ ಮುಂತಾದುವುಗಳನ್ನು ಮಾಡುವುದಿಲ್ಲ, ಮತ್ತು ಇವರ ಸಂಕಲ್ಪಗಳೂ ವ್ರತಗಳೂ ಚಿತ್ತಗಳೂ ಸಂಪೂರ್ಣವಾಗಿ ಒಟ್ಟುಗೂಡಿರುವುದಿಲ್ಲ. ಜತೆಜತೆಯಾಗಿದ್ದುಕೊಂಡು ತಂತಮ್ಮ ಆಸ್ತಿಗಳನ್ನು ಕಾಪಾಡಿಕೊಳ್ಳುತ್ತಾ ಸಾತ್ವಿಕ ಪ್ರಜೋತ್ಪಾದನೆಯನ್ನು ಮಾಡಿ ಮಕ್ಕಳನ್ನು ಹಂಚಿಕೊಳ್ಳುವರು. ವಿಧವೆಯಪಾಲಿಗೆ ಬಂದಮಕ್ಕಳು ವಿಧವೆಯ ವಿವಾಹಿತ ಪತಿಯ ಕುಲದವರಿಗೆ ಶ್ರಾದ್ಧಾದಿಗಳನ್ನು ಮಾಡುತ್ತಾ ಆ ಕುಲದ ಆಸ್ತಿಗಳನ್ನು ಅನುಭವಿಸುವುವು. ವಿಧುರನ ಪಾಲಿಗೆ ಬಂದ ಮಕ್ಕಳು ಅವನ ಕುಲದವರಿಗೆ ಶ್ರಾದ್ಧಾದಿಗಳನ್ನು ಮಾಡುತ್ತಾ ಆ ಕುಲದ ಆಸ್ತಿಗಳನ್ನು ಅನುಭವಿಸುವುವು. ಕುಲಕ್ರಮಾಗತವಾಗಿ ಬಂದ ಮಾನಮರ್ಯಾದೆಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಈಬಗೆಯ ನಿಯೋಗವನ್ನು ಆಚರಿಸಬಹುದು.

(C) ತೃತೀಯಪ್ರಭೇದ—"ಅದೇವೃಘ್ನ್ಯಪತಿಘ್ನೀಹೈಧಿ ಶಿವಾ ಪಶುಭ್ಯಃ ಸುಯಮಾಃ ಸುವರ್ಚಾಃ । ಪ್ರಜಾವತೀ ವೀರಸೂರ್ದೇವೃ ಕಾಮಾಸ್ಯೋನೇ ಮಮಗ್ನಿಂಗಾರ್ಹಪತ್ಯಂ ಸಪರ್ಯ॥ " ಎಂಬ ವೇದ ಮಂತ್ರದಲ್ಲಿ ತೋರಬರುವುದು ತೃತೀಯ ಪ್ರಭೇದ. ಈ ಮಂತ್ರದ ಅರ್ಥಕ್ಕೆ ೪೧-೪೨ನೆಯಪುಟಗಳನ್ನು ನೋಡಿರಿ. ಇದು ಜಹಗೀರಿ ಮುಂ ತಾದುವನ್ನುಳ್ಳ ವಿಧವೆಯರಿಗೆ ಸಂಬಂಧಪಡುವುದು. ಇಂತಹರು ತಮ್ಮ ಕುಲಗಳ ಸ್ವತ್ತುಗಳನ್ನೂ ಮಾನಮರ್ಯಾದೆಗಳನ್ನೂ ಕಾಪಾಡಿಕೊಳ್ಳು ವುದಕ್ಕಾಗಿ ಉತ್ತಮಕುಲದ ವಿಧುರರನ್ನು ನಿಯೋಗಮಾಡಿಕೊಳ್ಳಬಹು ದೆಂದು ಈ ಮಂತ್ರವು ತಿಳಿಸುತ್ತದೆ. ಈಬಗೆಯ ನಿಯೋಗದಿಂದ ಹು ಟ್ಟಿದ ಮಕ್ಕಳೆಲ್ಲಾ ಹೆಂಗಸಿನ ವಿವಾಹಿತಪತಿಯ ಕುಲಕ್ಕೆ ಸೇರುವುವು, ಜಹಗೀರಿಯನ್ನುಳ್ಳ ವಿಧವೆಯು ಇರುವಳೆಂದಿಟ್ಟುಕೊಳ್ಳೋಣ. ವೈದಿ ಕವಿವಾಹವೇ ಸ್ವಯಂವರವಾಗಿರುವಲ್ಲಿ ನಿಯೋಗವೂ ಹಾಗೆಯೇ ಇರ ಬೇಕು. ವಿಧುರನಾಗಿಯೂ ಬಡವನಾಗಿಯೂ ಇರುವ ವಿದ್ಯಾವಂತನಲ್ಲಿ ಆಕೆಗೆ ಪ್ರೀತಿಯು ನೆಲೆಗೊಂಡಿರಬಹುದು. ಪರಸ್ಪರ ಸಾಮ್ಯವು ಇತರ ವಿಷಯಗಳಲ್ಲಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಈ ವೇದಮಂತ್ರವು ಸಹಾಯಮಾಡುವುದು. ಆ ಬಡವನು ಆಕೆಯ ಮನೆಯಲ್ಲಿಯೇ ಇದ್ದು ಕೊಂಡು ಆಕೆಗಾಗಿಯೇ ಆಕೆಯಲ್ಲಿ ಪ್ರಜೋತ್ಪಾದನೆಯನ್ನು ಮಾಡು ವುದಕ್ಕೆ ಸಮ್ಮತಿಸಬಹುದು. ಆಕೆಯು ಪ್ರೀತಿಯಿಂದ ಕೊಡುವ ಧನವೇ ಆತನಿಗೆ ಆಸ್ತಿಯಾಗುವುದು. ವೇದವು ನಾನಾಸಂದರ್ಭದ ಜನಗಳಿಗೆ ಅನುಕೂಲವಾಗುವಂತಿರುವದು ಆಶ್ಚರ್ಯವೇನೂ ಅಲ್ಲ.

(D) ಚತುರ್ಥಪ್ರಭೇದ — " ಅನ್ಯಮಿಚ್ಛಸ್ವಸುಭಗೇಪತಿಂ ಮತ್ ॥ " ಎಂದು ಋಗ್ವೇದವಚನವಿರುವುದರಿಂದ ವಿವಾಹಿತಪತಿಯ ಆಜ್ಞೆಯಮೇಲೆ ಪತ್ನಿಯು ತನ್ನ ಗಂಡನು ಬದುಕಿರುವಾಗಲೇ ನಿಯೋ ಗಪತಿಯಿಂದ ಸಂತಾನವನ್ನು ಪಡೆಯಬಹುದು. ಈ ಸಂತಾನವುವಿವಾ ಹಿತಪತಿಯ ಕುಲಕ್ಕೆ ಸೇರುವುದು. ಪ್ರಜೋತ್ಪಾದನ ಕರ್ಮಕಾಲದಲ್ಲಿ.

ಮಾತ್ರ ತನ್ನ ನಿಯೋಗಪತಿಯೊಡನೆ ಪತ್ನಿಯು ಸೇರುವಳು. ಬೇರೆಕಾ ಲಗಳಲ್ಲಿ ವಿವಾಹಿತಪತಿಯೊಡನೆ ಇರುವಳು. ಕುಂತಿಯು ತನ್ನ ವಿವಾ ಹಿತ ಪತಿಯಾಜ್ಞೆಯಿಂದ ಸಂತಾನವನ್ನು ಈರೀತಿಯಲ್ಲಿ ಪಡೆದಳು. ವೈದಿಕವಿವಾಹದ ಆರುಲಕ್ಷಣಗಳಲ್ಲಿ ಮೊದಲನೆಯದು ಮಾತ್ರ ಈ ಬ ಗೆಯ ನಿಯೋಗದಲ್ಲಿ ಕಾಣಬರುತ್ತದೆ. ವಿವಾಹಿತಪತ್ನಿಯು ಬಂಜೆಯಾ ಗಿದ್ದರೆ ಆಕೆಯ ಆಜ್ಞೆಯಮೇಲೆ ಪತಿಯು ವಿಧವೆಯೊಬ್ಬಳೊಡನೆ ನಿ ಯೋಗದಿಂದ ಸೇರಿ ತನ್ನಕುಲಕ್ಕೆ ಸಂತಾನವನ್ನು ಪಡೆಯಬಹುದು. ಆದರೆ ಸಂತಾನವನ್ನು ಪಡೆದಮೇಲೆ ಆ ವಿಧವೆಯನ್ನು ಪತಿಯು ಬಿಟ್ಟು ಬಿಡಬೇಕು.

ಮೇಲೆ ಹೇಳಿರುವ ನಾಲ್ಕುಬಗೆಯ ನಿಯೋಗಗಳಲ್ಲಿ ಪ್ರಥಮ ಪ್ರಭೇದವು ವೈದಿಕ ವಿವಾಹವನ್ನು ಬಹುಮಟ್ಟಿಗೆ ಹೋಲುವುದು ಮತ್ತು ಉತ್ತಮವಾಗಿರುವುದು, ದ್ವಿತೀಯ ಪ್ರಭೇದವು ಮಧ್ಯಮವಾಗಿರುವುದು, ತೃತೀಯ ಪ್ರಭೇದವು ಕನಿಷ್ಟಪಕ್ಷಕ್ಕೆ ಸೇರುವುದು, ನಾಲ್ಕನೆಯ ಪ್ರಭೇದವು ಔಪ ಚಾರಿಕನಿಯೋಗವಾಗಿದೆ.

ಸಾತ್ವಿಕ ಪ್ರಜೋತ್ಪಾದನೆಯು ಅತ್ಯಾವಶ್ಯಕಕರ್ಮ ವಾಗಿರುವುದರಿಂದ ವೈದಿಕವಿವಾಹಕ್ಕೆ ವಧೂವರರ ಸಾಮ್ಯ ವನ್ನು ನೋಡುವಂತೆಯೇ ನಿಯೋಗದಾಂಪತ್ಯಕ್ಕೂ ವಿಧವಾ ವಿಧುರರ ಸಾಮ್ಯವನ್ನು ಸಾಧ್ಯವಾಗುವ ಮಟ್ಟಿಗೂ ನೋ ಡಬೇಕು.

ಗಾರ್ಹಪತ್ಯಾಗ್ನಿಯ ಸಂಪಾದನೆಗೆ ಅನುಕೂಲವಾಗು ವಂತೆ ವೈದಿಕವಿವಾಹದ ಮಂತ್ರಗಳನ್ನು ಸಂಯೋಜಿಸಿದೆ. ನಿ ಯೋಗದಾಂಪತ್ಯದಲ್ಲಿ ಗಾರ್ಹಪತ್ಯಾಗ್ನಿಯ ಸಂಪಾದನೆಯು ಇಲ್ಲದಿರುವುದರಿಂದ ವೈದಿಕವಿವಾಹದ ಮಂತ್ರಗಳು ನಿಯೋಗ

ಕ್ಕೆ ಉಪಯುಕ್ತಗಳಾಗಲಾರವು – ನಿಯೋಗದಲ್ಲಿ ನಾಲ್ಕು ಪ್ರಭೇದಗಳಿರುವುದರಿಂದ, ಆಯಾ ಪ್ರಭೇದಕ್ಕೆ ತಕ್ಕಂತೆ ಒಪ್ಪಂದವಾಗಬೇಕಾಗಿದೆ. ಆಗುವ ಒಪ್ಪಂದವು ಬಂಧುಮಿತ್ರ ವರ್ಗದವರ ಸಭೆಯಮುಂದೆ ಉತ್ಸವದೊಡನೆ ನಡೆಯಬೇಕು.

ಮುಸಲ್ಮಾನರ ಹಾವಳಿಯ ಕಾಲಕ್ಕೆ ಮುಂಚೆ ಹುಟ್ಟಿದ ಮನುಸ್ಮೃತಿ ಮುಂತಾದುವುಗಳಲ್ಲಿ ನಿಯೋಗವು ದೇಶ ಕಾಲಗಳಿಗನು ಗುಣವಾಗಿ ವರ್ಣಿಸಲ್ಪಟ್ಟಿದೆ. ಮುಸಲ್ಮಾನರ ಹಾವಳಿಯ ಕಾಲದಲ್ಲಿ ಹುಟ್ಟಿದ ಸ್ಮೃತಿಗಳಲ್ಲಿ ಅದರ ಹೆಸರೇ ಬರುವುದಿಲ್ಲ ; ಹಾಗೆ ಬಂದರೂ ಕಲಿವರ್ಜವೆಂದು ಹೇಳಿಬಿಟ್ಟಿರುವರು, ಹೀಗಾದುದೇನೂ ಆಶ್ಚರ್ಯವಲ್ಲ, ವೇದಾಧ್ಯಯನವು ಹಾಳಾಗಿ ಶ್ರುತಿಸಮ್ಮತಗಳಾದ ಸ್ತ್ರೀಯರ ಬ್ರಹ್ಮೋಪದೇಶವೂ ಪ್ರೌಢಾವಿವಾಹವೂ ಸ್ವಯಂವರವಿಧಿಯೂ ನಿರ್ಮೂಲವಾಗಿ ಶ್ರುತಿವಿರುದ್ಧಗಳಾದ ಉಪನಯನ ಕಾಲಾಪನ್ನವಿವಾಹವೂ ಕನ್ಯಾದಾನ ವಿಧಿಯೂ ಪುರುಷರಪುನರ್ವಿವಾಹವೂ ದ್ವಿಭಾರ್ಯಾಗ್ನಿ ಸಂಸರ್ಗವೂ ಬಂದ ಮೇಲೆ ನಿಯೋಗವು ನಿರ್ಮೂಲವಾದುದೇನಾಶ್ಚರ್ಯ ? ವಿಧುರರಾದ ನವೀನವಿದ್ವಾಂಸರು ಶ್ರುತಿವಿರುದ್ಧವಾಗಿ ವೈದಿಕ ವಿವಾಹವನ್ನು ಮಾಡಿಕೊಂಡು ತಾವುಮೆರೆದರು ; ವಿಧವೆಯರು ಸಹಗಮನವನ್ನು ಮಾಡದಿದ್ದ ಪಕ್ಷಕ್ಕೆ ತಲೆಯನ್ನು ಬೋಳಿಸಿಕೊಂಡು ಬ್ರಹ್ಮಚರ್ಯದಲ್ಲಿಯೇ ಸಾಯಬೇಕೆಂದು ಶ್ರುತಿ ವಿರುದ್ಧವಾಗಿ ವಿಧಿಸಿದರು.

ವಿಧವೆಗೆ ವಿಧವಾಗ್ನಿ ಯಿರುವುದರಿಂದಲೂ ವಿಧುರನಿ

ಗೆ ವಿಧುರರಾಗ್ನಿಯಿರುವುದರಿಂದಲೂ ವಿಧವಾ ವಿಧುರರ ನಿಯೋಗದಿಂದ ಹುಟ್ಟುವ ಮಕ್ಕಳು ಶೂದ್ರರಿಗೆ ಹುಟ್ಟಿದ ಮಕ್ಕಳಂತಿರುವುದಿಲ್ಲ.

## V ನಿಯೋಗ ವಿಚಾರದ ಫಲಿತಾಂಶಗಳು

ಒಂದು ಸಹಸ್ರವರುಷಗಳಿಂದಲೂ ನವೀನ ವಿದ್ವಾಂಸರೂ ಮಠಾಧಿಪತಿಗಳೂ "ಸಾಕ್ಷಾತ್ ಬ್ರಹ್ಮನಿಂದಲೇ ವೇದಗಳು ಮಹರ್ಷಿಗಳಿಗೆ ಉಪದೇಶಮಾಡಲ್ಪಟ್ಟವು, ವೇದಗಳು ಪೌರುಷೇಯಗಳಲ್ಲವೇ ಅಲ್ಲ, ವೇದಗಳಲ್ಲಿರುವುದನ್ನೆಲ್ಲಾ ದ್ವಿಜರೆಲ್ಲರೂ ಮಾಡಿಯೇತೀರಬೇಕು, ಮಾಡುವುದಿಲ್ಲವೆನ್ನುವರು ನಾಸ್ತಿಕರೂ ವೇದನಿಂದಿಕರೂ ಆಗುವರು" ಎಂದು ಹೇಳಿಕೊಂಡು ಬಂದಿರುತ್ತಾರೆ. ವೇದಮಾರ್ಗ ಪ್ರತಿಷ್ಠಾಪನಾಚಾರ್ಯರೆಂಬ ಮಹಾಬಿರುದನ್ನೂ,ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣರೆಂಬ ಮಹಾಬಿರುದನ್ನೂ ಶ್ರೀಮಠಾಧಿಪತಿಗಳು ಈಗಲೂ ಇಟ್ಟುಕೊಂಡಿರುವರು. ಹೀಗಿರುವುದರಿಂದ ವೇದವಿರುದ್ಧಾಚಾರಗಳನ್ನು ಇವರು ಬಿಡಲೇಬೇಕು, ಮತ್ತು ವೇದವಿಧಿಗಳನ್ನು ನಡೆಯಿಸಲೇಬೇಕು. ಆದುದರಿಂದ ನಿಯೋಗವಿಧಿಯ ವಿಚಾರದ ಫಲಿತಾಂಶಗಳನ್ನು ಇಲ್ಲಿ ಸಂಕ್ಷೇಪವಾಗಿ ಬರೆಯುವುದು ಆವಶ್ಯಕವಾಗಿದೆ. ಅವು ಯಾವುವೆಂದರೆ:—

(೧) "ಕುಹಸ್ವಿದ್ದೋಷಾಕುಹವಸ್ತೋಃ ರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ । ಕೋವಾಂಶಯುತ್ರಾ ವಿಧವೇವದೇವರಂ ಮರ್ಯಂನಯೋಷಾ ಕೃಣುತೇ ಸದಸ್ಥ ಆ ॥" ಎಂಬ ವೇದಮಂ

ತ್ರದಲ್ಲಿ " ವಿಧವೇವದೇವರಂ " ಎಂಬ ಉಪಮಾನವಿರುವುದರಿಂದ ನಿಃಯೋಗವಿಧಿಯನ್ನು ನಿಷೇಧಿಸಿರುವುದಕ್ಕೆ ಶ್ರೀಮಠಾಧಿಪತಿಗಳಿಗೆ ಶಾಸ್ತ್ರತಃ ಅಧಿಕಾರವೇ ಇಲ್ಲ. ನಿಯೋಗವಿಧಿಯನ್ನು ಮರಳಿ ಆಚರಣೆಗೆ ತರುವುದು ಶಾಸ್ತ್ರತಃ ಅವರ ಕರ್ತವ್ಯವಾಗಿದೆ.

(೨) "ಅದೇವೃಘ್ನ್ಯ ಪತಿಘ್ನೀ ಹೃಧಿಶಿವಾ ಪಶುಭ್ಯಃ ಸುಯಮಾಃ ಸುವರ್ಚಾಃ । ಪ್ರಜಾವತೀ ವೀರಸೂರ್ದೇವೃಕಾಮಾ ಶ್ಯೋನೇ ಮಮಗ್ನಿಂ ಗಾರ್ಹಪತ್ಯಂ ಸಪರ್ಯ್ಯ ॥ " ಎಂಬ ವೇದಮಂತ್ರದಲ್ಲಿ ಅದೇವಘ್ನಿ...ದೇವೃಕಾಮಾ....ಪ್ರಜಾವತಿ...ಇಮಮಗ್ನಿಂ.......ಸಪರ್ಯ್ಯ॥—ದ್ವಿತೀಯ ಪತಿಗೆ ದುಃಖವನ್ನುಂಟುಮಾಡದವಳಾಗಿಯೂ, ಸಂತಾನಕ್ಷಯವನ್ನು ನಿಲ್ಲಿಸುವುದಕ್ಕೆ ದ್ವಿತೀಯಪತಿಯನ್ನು ಕಾಮಿಸುವವಳಾಗಿಯೂ, ಪ್ರಜಾವತಿಯಾಗಿಯೂ ವಿವಾಹಿತಪತಿಯ ಈಮನೆಯಲ್ಲಿ ವಿಧವಾಗ್ನಿಯನ್ನು ಸೇವಿಸುವವಳಾಗು" ಎಂದಿರುವುದರಿಂದ ವೇದವಚನದಂತೆ ನಡೆದವಿಧವೆಗೆ ಬಹಿಷ್ಕಾರವನ್ನು ಹಾಕುವುದಕ್ಕೆ ಶ್ರೀಮಠಾಧಿಪತಿಗಳಿಗೆ ಶಾಸ್ತ್ರತಃ ಅಧಿಕಾರವಿಲ್ಲ; ಅಂತಹಳನ್ನು ಸನ್ಮಾನಿಸುವುದು ಶಾಸ್ತ್ರತಃ ಅವರ ಕರ್ತವ್ಯವಾಗಿದೆ.

(೩) " ಇಯಂನಾರೀಪತಿಲೋಕಂ ವೃಣಾನಾನಿಪದ್ಯತ ಉಪತ್ವಾಮರ್ತ್ಯ ಪ್ರೇತಂ । ಧರ್ಮಂ ಪುರಾಣ ಮನುಪಾಲಯಂತೀ ತಸ್ಯೈಪ್ರಜಾಂದ್ರವಿಣಂ ಚೇಹಧೇಹಿ ॥ ಎಂಬ ವೇದಮಂತ್ರದಲ್ಲಿ " ಮರ್ತ್ಯ, ತಸ್ಯೈಪ್ರಜಾಂದ್ರವಿಣಂ ಚೇಹಧೇಹೀ — ಮರ್ತ್ಯನೇ, ಸಂತಾನಾರ್ಥಿಯಾಗಿ ನಿನ್ನೆಡೆಗೈದಿರುವೀ ವಿಧವೆಯಲ್ಲಿ ಪ್ರಜೋತ್ಪಾದನೆಯನ್ನುಮಾಡು, ದ್ರವ್ಯವನ್ನೂ ವೀರ್ಯವನ್ನೂ ಇಡುವವನಾಗು " ಎಂದಿರುವುದರಿಂದ ವಿಧವೆಯನ್ನು ನಿಯೋಗವಿಧಿಯಿಂದ ಸ್ವೀಕರಿಸಿದ ಪುರುಷನಿಗೆ ಬಹಿಷ್ಕಾರವನ್ನು ಹಾಕುವದಕ್ಕೆ ಶಾಸ್ತ್ರತಃ ಶ್ರೀಮಠಾಧಿಪತಿಗಳಿಗೆ ಅಧಿಕಾರವಿಲ್ಲ. ವೇದಮಂತ್ರ ಸಹಿತವಾಗಿ ಕನ್ಯೆಯರೊಡನೆ ಪುನರ್ವಿವಾಹವನ್ನು ಮಾಡಿಕೊಳ್ಳುತ್ತಿರುವ ವಿಧುರರನ್ನು ವೇದಮಾರ್ಗ ಪ್ರಧ್ವಂಸಕರೆಂದು ನಿಗ್ರ

ಹಿಸಿ ಅವರಿಗೆ ಬಹಿಷ್ಕಾರವನ್ನು ಹಾಕುವುದು ಶಾಸ್ತ್ರತಃ ಶ್ರೀಮಠಾಧಿಪತಿಗಳ ಕರ್ತವ್ಯವಾಗಿದೆ. ಏಕೆಂದರೆ ವಿಧುರರು ಕನ್ಯೆಯರನ್ನು ಮದುವೆ ಮಾಡಿಕೊಳ್ಳುವುದು ವಿವಾಹದ ವೇದಮಂತ್ರಗಳಿಗೆ ವಿರುದ್ಧವಾಗಿರುವುದಲ್ಲದೆ " ವಿಧವೇವ ದೇವರಂ " ಎಂಬುದನ್ನೊಳಕೊಂಡಿರುವ " ಕುಹಸ್ವಿದ್ದೋಷಾ " ಎಂಬವೇದಮಂತ್ರಕ್ಕೂ, "ದೈವೃಕಾಮಾ " ಎಂಬುದನ್ನೊಳಕೊಂಡಿರುವ " ಅದೇವೃಘ್ನ್ಯಪತಿಘ್ನೀ " ಎಂಬ ವೇದಮಂತ್ರಕ್ಕೂ, " ಪುನರ್ಭುವಾಪರಃ ಪತಿಃ " ಎಂಬುದನ್ನೊಳಕೊಂಡಿರುವ ಸಮಾನಲೋಕೋಭವತಿ " ಎಂಬ ವೇದಮಂತ್ರಕ್ಕೂ, " ಹಸ್ತಗ್ರಾಭಸ್ಯದಿಧಿಷೋಸ್ತ್ವವೇದಂ ಪತ್ಯುರ್ಜನಿತ್ವಂ " ಎಂಬುದನ್ನೊಳಕೊಂಡಿರುವ " ಉದೀರ್ಷ್ವನಾರ್ಯಭಿ ಜೀವಲೋಕಂ " ಎಂಬವೇದಮಂತ್ರಕ್ಕೂ ವಿರುದ್ಧವಾಗಿದೆ.

(೪) " ಉದೀರ್ಷ್ವನಾರ್ಯಭಿ ಜೀವಲೋಕಂ ಗತಾಸುಮೇತಮುಪಶೇಷಏಹಿ | ಹಸ್ತಗ್ರಾಭಸ್ಯದಿಧಿ ಷೋಸ್ತ್ವವೇದಂ ಪತ್ಯುರ್ಜನಿತ್ವಮಭಿಸಂಬಭೂಥ॥ "ಎಂಬವೇದಮಂತ್ರದಲ್ಲಿ "ಹಸ್ತಗ್ರಾಭಸ್ಯದಿಧಿಷೋಸ್ತ್ವವೇದಂ ಪತ್ಯುರ್ಜನಿತ್ವಮಭಿಸಂ ಬಭೂಥ॥—ಎಲೈ ವಿಧವೆಯೇ, ಈ ದಿಧಿಷುವಿನಿಂದ ಹುಟ್ಟಿದಮಕ್ಕಳು ಪಾಣಿಗ್ರಹಣಮಾಡಿದ ಪತಿಯಿಂದ ಹುಟ್ಟಿದಮಕ್ಕಳಂತೆ ನಿನಗೂ ಆಗುವುವು ; ಪತ್ನಿಯಿಂದ ಹುಟ್ಟಿದ ಮಕ್ಕಳಂತೆ ಅತನಿಗೂ ಆಗುವುವು -ಸಂತಾನಕ್ಷಯವಾಗದಂತೆ ಮಾಡಿಕೊಂಡು ಸುಖಸಂಯುಕ್ತಳಾಗು "ಎಂದಿರುವುದರಿಂದ ವಿಧವೆಯರಿಗೆ ತಲೆಯನ್ನು ಬೋಳಿಸುವ ವೇದವಿರುದ್ಧಪದ್ಧತಿಯನ್ನು ಕಾಲಹರಣಮಾಡದೆ ನಿಲ್ಲಿಸಿ, ವಿಧವೆಯರು ದ್ವಿತೀಯ ಪತಿಯಿಂದ ಪಡೆದ ಮಕ್ಕಳೊಡನೆ ಶ್ರೀಮಠಗಳಿಗೆ ಬಂದಾಗ ತೀರ್ಥಪ್ರಸಾದಗಳನ್ನು ಅನುಗ್ರಹಿಸುವುದು ಶಾಸ್ತ್ರತಃ ಶ್ರೀಮಠಾಧಿಪತಿಗಳ ಕರ್ತವ್ಯವಾಗಿದೆ.

## VI ಶ್ರೀಮಠಾಧಿಪತಿಗಳ ನಡೆವಳಿಕೆ

ವಿವಾಹಿತ ಪುರುಷನು ಸತ್ತಾಗ ಆವನ ಶರೀರವನ್ನು ಸ್ಮಶಾ

ನಕ್ಕೆ ತೆಗೆದುಕೊಂಡುಹೋಗಿ, ಸಂಸ್ಕಾರವನ್ನು ಮಾಡಿ, ಅದನ್ನು ಚಿತಿಯ ಮೇಲಿಟ್ಟು ದಹನ ಕರ್ಮವನ್ನು ಪ್ರಾರಂಭಿಸುವುದಕ್ಕೆ ಪೂರ್ವದಲ್ಲಿ, ಗೋಳಾಡುತ್ತಿರುವ ಅವನ ಪತ್ನಿಯನ್ನು ಕುರಿತು "ಇಯಂ ನಾರೀ ಪತಿಲೋಕಂ ವೃಣಾನಾ" ಎಂಬ ವೇದಮಂತ್ರವನ್ನೂ, "ಉದೀರ್ಷ್ವನಾರ್ಯ ಭಿಜೀವಲೋಕಂ" ಎಂಬ ವೇದಮಂತ್ರವನ್ನೂ ಹೇಳಿ, ಆಕೆಗೆ ಸಮಾಧಾನವನ್ನು ಮಾಡಿ ಈಗಲೂ ಮನೆಗೆ ಕರೆದು ತರುತ್ತಿರುವರು. ಶ್ರೀ ಮಠಾಧಿಪತಿಗಳು ನೇಮಿಸಿದ ಮಠಾಧಿಕಾರಿಗಳ ಗುಂಪಿನವರು ಉತ್ತರ ಕ್ರಿಯೆಗಳ ಪೌರೋಹಿತ್ಯಕ್ಕೆ ಹೋಗಿ ಹೆಚ್ಚಾದ ದ್ರವ್ಯಗಳಿಗೆ ಹೋರಾಡಿ, ಅವುಗಳನ್ನು ತಂದು, ಶ್ರೀಮಠಗಳಿಗೆ ಗುತ್ತಿಗೆಯ ಮೊಬಲಗುಗಳನ್ನು ಈಗಲೂ ಕೊಡುತ್ತಿರುವರಲ್ಲವೆ? ಇವರು ನಡೆಯಿಸುವ ಕೃತ್ಯಗಳ ಮಾನಾವಮಾನಗಳಿಗೆ ಶ್ರೀಮಠಾಧಿಪತಿಗಳೂ ಭಾಗಿಗಳಾಗಲೇಬೇಕಲ್ಲವೆ? ಇವರು ಒಪ್ಪಿರುವ ವೇದಮಂತ್ರಗಳನ್ನೇ ಹೇಳುತ್ತಿದಾರಲ್ಲವೆ? ಗಂಡನು ಸತ್ತನೆಂದು ಎದೆಯನ್ನು ಬಡಿದುಕೊಳ್ಳುತ್ತಾ ಗೋಳಾಡುತ್ತಿರುವ ಹೆಂಡತಿಗೆ "ಈ ವಿಧವೆಯು ವೇದ ಪ್ರತಿಪಾದ್ಯವಾದ ಸಂತಾನೋತ್ಪತ್ತಿ ಧರ್ಮವನ್ನು ಪರಿಪಾಲಿಸುವುದಕ್ಕಾಗಿ, ತನ್ನ ಮೃತ ಪತಿಯನ್ನು ಬಿಟ್ಟು, ಪತಿಸುಖವನ್ನು ಬಯಸುವವಳಾಗಿ ನಿನ್ನ ಸಮೀಪವನ್ನೈದಿರುವಳು. ಎಲೈ ಮಾನವನೇ, ಅವಳಲ್ಲಿ ನಿನ್ನ ದ್ರವ್ಯವನ್ನೂ ವೀರ್ಯವನ್ನೂ ಇಡುವವನಾಗಿ ಪ್ರಜೋತ್ಪತ್ತಿಯನ್ನು ಮಾಡು" ಎಂಬ ಅರ್ಥವನ್ನು ಕೊಡುವ "ಇಯಂ ನಾರೀ ಪತಿಲೋಕಂ

ವೃಣಾನಾ" ಎಂಬ ವೇದಮಂತ್ರವನ್ನೂ, "ಎಲೈ ನಾರೀ, ಗತಾಸುವಾದೀಪತಿಯ ಆಸೆಯನ್ನು ಬಿಟ್ಟೇಳು! ಜೀವಂತ ನಾದ ದ್ವಿತೀಯ ಪತಿಯನ್ನು ಹೊಂದಿ ಸಂತಾನೋತ್ಪತ್ತಿಯ ನ್ನು ಮಾಡಿಕೊಂಡಿರು. ಹೀಗೆ ಹುಟ್ಟಿದ ಮಕ್ಕಳು ಪಾಣಿ ಗ್ರಹಣ ಮಾಡಿದ ಪತಿಯಿಂದ ಹುಟ್ಟಿದ ಮಕ್ಕಳಂತೆ ನಿನಗೂ ಆಗುವುವು, ಪತ್ನಿಯಿಂದ ಹುಟ್ಟಿದ ಮಕ್ಕಳಂತೆ ದಿಧಿಷುವಿಗೂ ಆಗುವುವು. ಸಂತಾನ ಕ್ಷಯವಾಗದಂತೆ ಮಾಡಿಕೊಂಡು ಸುಖ ಸಂಯುಕ್ತಳಾಗು" ಎಂಬ ಅರ್ಥವನ್ನು ಕೊಡುವ "ಉದೀರ್ಷ್ವ ನಾರ್ಯಭಿ ಜೀವಲೋಕಂ" ಎಂಬ ವೇದಮಂ ತ್ರವನ್ನೂ ಹೇಳಿ, ಮನೆಗೆ ಕರೆದುಕೊಂಡು ಬಂದು, ವೇದ ವಾಕ್ಯದಂತೆ ನಡೆಯುವುದಕ್ಕೆ ಬದಲಾಗಿ, ಹತ್ತನೆಯ ದಿವಸ ದಲ್ಲಿ ಅವಳನ್ನು ಎಳೆದುಕೊಂಡುಹೋಗಿ,ನಾಪಿತನಿಂದ ಅವಳ ತಲೆಯನ್ನು ಬೋಳಿಸಿ, ಮನೆಗೆ ಹಿಡಿದು ತಂದು ಕೆಡಹಿ, "ನೀ ನು ಹೆಂಗಸು, ನಿನಗೆಲ್ಲಿ ಬಂತು ಪುನರ್ವಿವಾಹ? ನಾವಾದರೆ ಗಂಡಸರು, ನಮಗುಂಟು ಪುನರ್ವಿವಾಹ; ಮಾತನಾಡಿದರೆ ಬಹಿಷ್ಕಾರವನ್ನು ಹಾಕಿಸುತ್ತೇವೆ" ಎಂದು ಗದರಿಸಿ ಶ್ರೀಮಠ ಗಳ ಕಡೆಯವರಲ್ಲಿ ಅನೇಕರು ಹೆಂಗಸರನ್ನು ಗೋಳಾಡಿಸು ತ್ತಿಲ್ಲವೆ? ಈ ನಡವಳಿಕೆಯು ಸರಿಯೆ?

ನವೀನವಿದ್ವಾಂಸರಿಂದಲೂ ಮಠಾಧಿಪತಿಗಳು ಕೆಲವ ರಿಂದಲೂ ಮುಸಲ್ಮಾನರ ಹಾವಳಿಯ ಕಾಲದಲ್ಲಿ ವೈದಿಕ ಧರ್ಮವು ರೂಪಾಂತರವನ್ನು ಹೊಂದಿ ಕೆಟ್ಟುಹೋದುದನ್ನು ಇಲ್ಲಿ ಸಾಕ್ಷೇಪವಾಗಿ ತಿಳಿಸುವುದು ಉಚಿತವಾಗಿದೆ. ಮುಸ

ರಿಂದ ಅಹಿಂಸೆಯನ್ನು ಅನುಮೋದಿಸತಕ್ಕ ಯಾವ ಧರ್ಮದವರೇ ಆಗಲಿ, ಮತ್ತು ರಾಜಕೀಯ ವಿಷಯದಲ್ಲಿ ಯಾವ ಅಭಿಪ್ರಾಯವುಳ್ಳವರೇ ಆಗಲಿ, ಈ ಸತ್ಯಾಗ್ರಹಧರ್ಮವನ್ನನುಸರಿಸಲು ಅಭ್ಯಂತರವಿಲ್ಲ. ಈ ಉಭಯ ವಿಷಯಗಳಲ್ಲಿ ಸತ್ಯಾಗ್ರಹಧರ್ಮಾನುಯಾಯಿಯು ಸ್ವತಂತ್ರ ಅಭಿಪ್ರಾಯವುಳ್ಳವನಾಗಿದ್ದಾನೆ. ಆದಕಾರಣ ಈ ವಿಷಯಗಳಲ್ಲಿ ಭಿನ್ನಾಭಿಪ್ರಾಯವುಳ್ಳವರು ಕೂಡಾ ಸತ್ಯಾಗ್ರಹಧರ್ಮದವರಾಗಿರಬಹುದು.

ಕಳೆದ ೧೫ ವರ್ಷಗಳಿಂದಲೂ ನಾನು ರಾಜಕೀಯ ಮತ್ತು ಸಾಮಾಜಿಕ ವಿಷಯಗಳಲ್ಲಿ ಲೇಖನ ಮತ್ತು ಭಾಷಣಗಳ ಮೂಲಕ ಅತ್ಯಲ್ಪ ಸೇವೆಯನ್ನು ಮಾಡಿರುವುದರಿಂದ ಕರ್ಣಾಟಕ ಭಾಷಾಭಿಮಾನಿಗಳಿಗೆ ಸ್ವಲ್ಪ ಪರಿಚಯವುಳ್ಳವನಾಗಿದ್ದೇನೆ. ಮತ್ತು ಕರ್ಣಾಟಕದ ಬೇರೆ ಬೇರೆ ಭಾಗಗಳಿಗೆ ಹೋದಾಗ ಅನೇಕರು ಕೆಲವು ಪ್ರಶ್ನೆಗಳನ್ನು ಮಾಡಿದ್ದರು. ಆದುದರಿಂದ ಈ ನನ್ನ ನೂತನ ಪ್ರಯತ್ನದ ವಿಷಯದಲ್ಲಿ ಯಾರಲ್ಲಿಯೂ ತಪ್ಪು ಅಭಿಪ್ರಾಯವುಂಟಾಗಲು ಅವಕಾಶವಿರಬಾರದೆಂದು ಈ ಕೆಳಗಿನ ವಿಷಯಗಳನ್ನು ತಿಳಿಸುವುದು ಆವಶ್ಯಕವಾಗಿದೆ.

ಮಹಾತ್ಮರಿಂದ ಪ್ರಣೀತವಾದ ಈ ಸತ್ಯಾಗ್ರಹಧರ್ಮವನ್ನು ನಾನು ಅನುಸರಿಸತಕ್ಕವನಾಗಿದ್ದರೂ ಮಹಾತ್ಮರ ಎಲ್ಲಾ ಅಭಿಪ್ರಾಯಗಳೂ ನನಗೆ ಮಾನ್ಯವಾಗಿವೆಯೆಂದು

ತಿಳಿಯಬಾರದು. ಹಿಂದುಧರ್ಮದ ವಿಷಯದಲ್ಲಿರುವ ಮಹಾತ್ಮರ ಅಭಿಪ್ರಾಯಗಳಲ್ಲಿ ಅನೇಕ ಸಂಗತಿಗಳು ನನಗೆ ಸಮ್ಮತವಿಲ್ಲ. ಮತ್ತು ರಾಷ್ಟ್ರೀಯ ಸಭೆಯಧ್ಯೇಯ (Creed) ದಲ್ಲಿ ಸ್ವರಾಜ್ಯಸ್ಪಷ್ಟೀಕರಣದ ವಿಷಯದಲ್ಲಿರುವ ಮಹಾತ್ಮರ ಅಭಿಪ್ರಾಯವು ನನಗೆ ಒಪ್ಪಿಗೆಯಿಲ್ಲ. ಆದುದರಿಂದ ನಾನು ರಾಷ್ಟ್ರೀಯ ಸಭೆಗೆ ಮೆಂಬರನಾಗಿಲ್ಲ.

ಹಿಂದುಸ್ಥಾನಕ್ಕೆ ಸ್ವರಾಜ್ಯವು ಪ್ರಾಪ್ತವಾದನಂತರ ಸತ್ಯಾಗ್ರಹಧರ್ಮವು ಈ ದೇಶಕ್ಕೆ ಅನಾವಶ್ಯಕವಾಗಿ ಪರಿಣಮಿಸುತ್ತದೆಂದು ನಾನು ತಿಳಿಯುವುದಿಲ್ಲ. ಆದರೆ ಆಗ ಇದು ಇನ್ನೂ ಹೆಚ್ಚು ಆವಶ್ಯಕವಾಗಿಯೇ ಪರಿಣಮಿಸುತ್ತದೆ. ಆದುದರಿಂದ ರಾಜಕೀಯಪರ ತಂತ್ರದಲ್ಲಿರುವವರು ಮಾತ್ರ ಈ ಧರ್ಮವನ್ನನುಸರಿಸಬೇಕೆಂದುತಿಳಿಯುವುದು ವಿಹಿತವಲ್ಲ. ಪ್ರಪಂಚದ ಈಗಿನ ಸಕಲ ಸ್ವತಂತ್ರ ರಾಷ್ಟ್ರಗಳೂ ಈ ಧರ್ಮವನ್ನನುಸರಿಸುವುದು ಆವಶ್ಯಕವಾಗಿದೆ. ಹೀಗಿರುವಾಗ ಭರತಖಂಡದ ದೇಶಿಸಂಸ್ಥಾನಗಳಲ್ಲಿರುವವರೂ ಈ ಸತ್ಯಾಗ್ರಹಧರ್ಮವನ್ನನುಸರಿಸಬೇಕೆಂದು ಬೇರೆಯಾಗಿ ಹೇಳಬೇಕಾದುದೇ ಇಲ್ಲ.

ರಾಜಕೀಯ, ಸಾಮಾಜಿಕ, ಮೊದಲಾದ ಯಾವ ಸಭೆಗಳೇ ಆಗಲಿ, ಅಥವಾ ಸಂಘಗಳೇ ಆಗಲಿ, ಅವು ಬಹುಭಾಗದವರ ಅಭಿಪ್ರಾಯದಂತೆಯೇ ನಡೆಯುತ್ತಿರುತ್ತವೆ. ಅವುಗಳಿಗೆ ಬಹುಮತವೇ ಪ್ರಾಣವು. ಸತ್ಯಾಗ್ರಹಧರ್ಮವನ್ನನುಸರಿಸುವವರಿಗಾದರೋ ಸತ್ಯವೇ ಪ್ರಾಣವು. ಆದುದರಿಂದ

ನಿಜವಾದ ಸತ್ಯಾಗ್ರಹಧರ್ಮಿಯು ಇಂಥ ಬಹುಮತಾನುಗುಣ್ಯ ವಾಗಿ ನಡೆಯುವ ಸಭೆಗಳಲ್ಲಾಗಲಿ, ಸಂಘಗಳಲ್ಲಾಗಲಿ, ಸೇರಿ ಅವುಗಳಂತೆ ಆಚರಿಸುವುದಿಲ್ಲ. ಆದರೆ ತಾನು ಮಾತ್ರ ತನ್ನ ಅಭಿಪ್ರಾಯದಂತೆ ಇಂಥ ಅನೇಕ ಸಭೆಗಳನ್ನೂ, ಸಂಘಗಳ ನ್ನೂ, ನಡೆಯಿಸಬಹುದು. ಸತ್ಯಾಗ್ರಹಧರ್ಮವನ್ನು ಸರಿಯಾ ಗಿಯೇ ಆಚರಿಸಬೇಕಾದರೆ ಆರಂಭದಲ್ಲಿ ಇಂಥ ಯಾವ ಸಭೆ ಗಳಿಗಾಗಲಿ, ಅಥವಾ ಸಂಘಗಳಿಗಾಗಲಿ, ಸಂಬಂಧಪಡದಂತಿರು ವುದೇ ಯುಕ್ತವೆಂದು ಭಾವಿಸಿದ್ದೇನೆ.

ದಾವಣಗೆರೆ, }
ತಾ. ೧೫-೧-೨೨. }

ಎಂ. ಎಂ. ಹರ್ಡೀಕರ್.

# ಸತ್ಯಾಗ್ರಹಧರ್ಮದ

## ನಿಯಮಗಳು.

---

### ೧. ಸತ್ಯ.

ಅಸತ್ಯವನ್ನಾಡದಿದ್ದಮಾತ್ರದಿಂದಲೇ ಈ ನಿಯಮವನ್ನು ಪಾಲಿಸಿದಂತಾಗಲಿಲ್ಲ. ದೇಶಹಿತಾರ್ಥವಾಗಿಯುಕೂಡಾ ಯಾರಿಗೂ ಮೋಸಗೊಳಿಸಬಾರದೆಂಬ ಭಾವನೆಯಿರಬೇಕು. ಸತ್ಯಕ್ಕೋಸ್ಕರ ತಾಯಿ, ತಂದೆ, ಮುಂತಾದ ಹಿರಿಯರ ಸಂಗಡ ಹೇಗೆ ವರ್ತಿಸಬೇಕೆಂಬುದನ್ನು ಭಕ್ತಾಗ್ರಣಿಯಾದ ಪ್ರಹ್ಲಾದನ ಚರಿತ್ರಯಿಂದ ತಿಳಿದುಕೊಳ್ಳಬೇಕು.

### ೨. ಅಹಿಂಸೆ.

ಪಶ್ವಾದಿ ಪ್ರಾಣಿಗಳ ಕೊಲೆಮಾಡದಿರುವುದಷ್ಟೇ ಅಹಿಂಸಾವ್ರತವಲ್ಲ. ಯಾರು ಅನ್ಯಾಯ ಮಾಡುತ್ತಾರೆಂದು ನಾವು ತಿಳಿಯುತ್ತೇವೆಯೋ ಅವರನ್ನು ಕೂಡಾ ನಾವು ಕೊಲ್ಲಬಾರದು. ಅವರ ಮೇಲೆ ಕೋಪಮಾಡದೆ ದಯೆಯನ್ನೇ ತೋರಿಸಬೇಕು. ತಾಯಿ ತಂದೆಗಳ, ಸರಕಾರದವರ, ಅಥವಾ ಅನ್ಯರ ಯಾವಕೃತ್ಯವು ನಮಗೆ ಬಲಾತ್ಕಾರದ್ದೆಂದು ತೋರುತ್ತದೆಯೋ ಅದನ್ನು ಪ್ರತೀಕಾರ ಮಾಡಬೇಕು. ಆದರೆ ಆ ಬಲಾತ್ಕಾರ ಮಾಡುವವರನ್ನು ಕೊಲ್ಲಬಾರದು ; ಗಾಯಪಡಿಸಬಾರದು ; ಕೇವಲ ದಯೆಯಿಂದಲೇ ಆ ಬಲಾತ್ಕಾರವನ್ನು ಜಯಿಸಬೇಕು. ಆ ಜಯವು ದೊರೆಯುವವರೆಗೂ

ಪ್ರಾಣದಾಸೆಯನ್ನು ಬಿಟ್ಟುಬಿಟ್ಟು ದುಃಖವನ್ನನುಭವಿಸಲು ಸಿದ್ಧರಾಗಬೇಕು.

### ೩. ಬ್ರಹ್ಮಚರ್ಯ.

ಬ್ರಹ್ಮಚರ್ಯವ್ರತವನ್ನಾಚರಿಸದೆ ಮೇಲಣ ನಿಯಮಗಳನ್ನನುಸರಿಸುವುದು ಪ್ರಾಯಶಃ ಸಾಧ್ಯವೇ ಅಲ್ಲ. ಪರಸ್ತ್ರೀಯರಲ್ಲಿ ಪಾಪ ದೃಷ್ಟಿಯನ್ನಿಡದಿದ್ದ ಮಾತ್ರದಿಂದ ಈ ನಿಯಮವನ್ನನುಸರಿಸಿದಂತಾಗುವುದಿಲ್ಲ. ಮನಸ್ಸಿನಿಂದಲೂ ವಿಷಯೇಂದ್ರಿಯಗಳ ವಿಕಾರವನ್ನು ನಿರೋಧಿಸಬೇಕು. ಈ ವ್ರತವನ್ನು ಹಿಡಿದವರು ವಿವಾಹಿತರಾಗಿದ್ದರೆ ಸ್ವಸ್ತ್ರೀಯಲ್ಲಿ ಕೂಡಾ ವಿಷಯೋಪಭೋಗವನ್ನು ಮಾಡಬಾರದು. ಅವಳು ಸ್ನೇಹಿತಳೆಂದು ತಿಳಿದು ಅವಳ ಸಂಗಡ ನಿರ್ಮಲವಾದ ಸಂಬಂಧವನ್ನಿಡಬೇಕು.

### ೪. ಅಸ್ವಾದ.

ನಾಲಿಗೆಯನ್ನು ಬಿಗಿ ಹಿಡಿಯದಿದ್ದರೆ ಮೇಲಣ ನಿಯಮಗಳನ್ನು ಮುಖ್ಯವಾಗಿ ಬ್ರಹ್ಮಚರ್ಯ ವ್ರತವನ್ನು ಆಚರಿಸುವುದು ಸಾಧ್ಯವಲ್ಲ. ಆದುದರಿಂದ ಆಹಾರವು ದೇಹರಕ್ಷಣೆಗೆ ಮಾತ್ರ ಇದೆಯೆಂದು ತಿಳಿದು ದೇಶಸೇವೇಚ್ಛೆಯಿಂದ ನಿರ್ದೋಷವಾದ ಆಹಾರವನ್ನು ಸೇವಿಸಬೇಕು. ವಿಕಾರವನ್ನುಂಟುಮಾಡುವ ಎಲ್ಲಾ ಪದಾರ್ಥಗಳನ್ನೂ ಒಂದೇ ಸಾರೆಗೆ ಅಥವಾ ಕ್ರಮವಾಗಿ ಬಿಟ್ಟುಬಿಡಬೇಕು.

### ೫. ಅಸ್ತೇಯ.

...ಸ್ಯರ ಪದಾರ್ಥಗಳನ್ನು ಕದಿಯದಿರುವುದಷ್ಟೇ ಅಸ್ತೇಯವ್ರತವಲ್ಲ. ಅನ್ನ ವಸ್ತ್ರಾದಿಗಳು ನಮಗೆ ಎಷ್ಟು ಆವಶ್ಯ

ಕವೋ ಅದಕ್ಕಿಂತಲೂ ಹೆಚ್ಚಾಗಿ ಸಂಗ್ರಹಿಸುವುದು ಕೂಡಾ ಕಳ್ಳತನವೇ ಸರಿಯೆಂದು ತಿಳಿಯಬೇಕು.

## ೬. ಅಪರಿಗ್ರಹ.

ಬಹು ಪದಾರ್ಥಗಳನ್ನು ಸಂಗ್ರಹಿಸಿಡಬಾರದು. ಇಷ್ಟೇ ಅಲ್ಲ; ದೇಹಪೋಷಣೆಗೆ ಯಾವ ಪದಾರ್ಥಗಳ ಅವಶ್ಯಕತೆ ಯಿಲ್ಲವೋ ಅವುಗಳನ್ನು ಕೂಡಾ ಸಂಗ್ರಹಿಸಬಾರದು. ಖರ್ಜಿ ಯಿಲ್ಲದೆ ಕೆಲಸ ನಡೆಯುತ್ತಿದ್ದರೆ ಆಗ ಅದನ್ನಿಟ್ಟುಕೊಳ್ಳಬಾ ರದು. ತನ್ನ ಜೀವನವು ಆದಷ್ಟು ಸುಲಭವಾಗಿ ನಡೆಯು ವಂತೆ ಪ್ರಯತ್ನಿಸಬೇಕು.

## ೭. ಸ್ವದೇಶಿ.

ಯಂತ್ರ ಕ್ರಿಯೆಗಳಿಂದ ಹಿಂಸೆಯು ವಿಶೇಷವಾಗಿ ಆಗು ತ್ತದೆ. ಯಂತ್ರವನ್ನು ಮಾಡುವಾಗಲು, ಉಪಯೋಗಿಸು ವಾಗಲು, ಅಗ್ನಿಯಿಂದ ಅಸಂಖ್ಯಜೀವಿಗಳು ಸಾಯುತ್ತವೆ. ಕಾರ್ಯಾಲಯಗಳ ಯಜಮಾನರು ಸ್ವಾರ್ಥಕ್ಕಾಗಿ ಅನೇಕ ಕೂಲಿಕಾರರನ್ನು ಹಿಂಸಿಸುತ್ತಾರೆ. ಯಂತ್ರ ಮೂಲಕವಾಗಿ ಪದಾರ್ಥಗಳುಂಟಾದರೆ ಅವುಗಳ ಪ್ರಸಾರವು ವಿಶೇಷವಾಗು ತ್ತದೆ. ಆಗ ಅಸ್ತೇಯ ಮತ್ತು ಅಪರಿಗ್ರಹ ನಿಯಮಗಳಿಗೆ ಭಂಗವುಂಟಾಗುತ್ತದೆ. ಯಾಂತ್ರಿಕ ಪದಾರ್ಥಗಳನ್ನುಪಯೋ ಗಿಸುವ ರೂಢಿಯುಂಟಾದರೆ ಸೌಂದರ್ಯದ ಕಡೆಗೆ ಗಮನ ಹೋಗಿ ಆ ಕೃತ್ರಿಮ ಶೋಭೆಯು ಬ್ರಹ್ಮಚರ್ಯವ್ರತಕ್ಕೆ ಭಂಗವನ್ನುಂಟುಮಾಡುತ್ತದೆ.

ದೂರದ ಪದಾರ್ಥ ಮತ್ತು ನಡತೆಗಳಿಗಿಂತ ನೆರೆಯ ಪದಾರ್ಥ ಮತ್ತು ನಡತೆಗಳು ಸ್ವಾಭಾವಿಕವಾಗಿಯೇ ಹೆಚ್ಚು ಪ್ರೇಮಾಸ್ಪದವಾದವುಗಳಿರುತ್ತವೆ. ಇದೇ ಸ್ವದೇಶ ಪ್ರೇಮದ ಲಕ್ಷಣವು. ಇದರಲ್ಲಿಯೇ ಪರಮಾರ್ಥದ ಮೂಲವಿದೆ. ಹತ್ತಿರದಲ್ಲಿದ್ದ ಅಂಗಡಿಯ ಪದಾರ್ಥಗಳನ್ನು ತೆಗೆದುಕೊಳ್ಳದೆ ದೂರದಲ್ಲಿದ್ದ ಅಂಗಡಿಯ ಪದಾರ್ಥಗಳನ್ನು ತೆಗೆದುಕೊಳ್ಳುವುದರಲ್ಲಿ ಪ್ರಾಯಶಃ ಸ್ವಾರ್ಥ ಬುದ್ಧಿಯೇ ಇರುತ್ತದೆ. ಸ್ವದೇಶಿ ಬಟ್ಟೆಗಳನ್ನು ಬಿಟ್ಟದ್ದರಿಂದ ಭರತಖಂಡದ ಕೈಮಗ್ಗಗಳೆಲ್ಲಾ ಹಾಳಾಗಿ ಹೋದವು. ಭರತಖಂಡವು ಸ್ವದೇಶಿ ನಿಯಮವನ್ನು ಭಂಗಮಾಡಿ ಮಹಾ ಪಾಪವನ್ನು ಕಟ್ಟಿಕೊಂಡಿತೆಂದು ಧಾರಾಳವಾಗಿ ಹೇಳಬಹುದು.

ಈ ನಿಯಮವನ್ನನುಸರಿಸುವವರು ಕೈ ನೂಲು ಕೈಮಗ್ಗಗಳಿಂದಾದ ಬಟ್ಟೆಗಳನ್ನೇ ಸಾದಾ ಹೊಲಿಸಿ ಉಪಯೋಗಿಸಬೇಕು. ಪರದೇಶದ ಗುಂಡಿಗಳನ್ನು ಅನ್ಯದೇಶಗಳಂತಹ ಹೊಲಿಗೆಯನ್ನು ಉಪಯೋಗಿಸಬಾರದು. ಇದೇತತ್ವವನ್ನು ಇತರ ಪದಾರ್ಥಗಳ ವಿಷಯದಲ್ಲಿಯೂ ಅನುಸರಿಸಬೇಕು.

## ೮. ನಿರ್ಭಯತೆ.

ಹೇಡಿಯು ಸತ್ಯಾಗ್ರಹ ಧರ್ಮವನ್ನನುಸರಿಲು ಅಸಮರ್ಥನು. ರಾಜರಿಗೆ, ಪ್ರಜೆಗಳಿಗೆ ಕಳ್ಳರಿಗೆ ಮತ್ತು ಕುಟುಂಬದವರೇ ಮೊದಲಾದವರಿಗೆ ಭಯಪಡಬಾರದು. ಇಷ್ಟೇ ಅಲ್ಲ ; ಮರಣಕ್ಕು ಕೂಡಾ ಅಂಜಬಾರದು. ತನ್ನ ಮತ್ತು ಅನ್ಯರ ರಕ್ಷಣೆಯನ್ನು ಆತ್ಮಬಲದಿಂದಲೇ ಮಾಡಿಕೊಳ್ಳಬೇಕು.

## ೯. ಸ್ಪರ್ಶತೆ.

ರೂಢಿಯ ಧರ್ಮವನ್ನನುಸರಿಸಿದ ಹಿಂದುಗಳು ಹೊಲಿಯ ಮಾದಿಗ, ಮೊದಲಾದ ಅಂತ್ಯಜರನ್ನು ಮುಟ್ಟಬಾರದೆಂತಲೂ, ಅವರನ್ನು ಮುಟ್ಟಿದರೆ ತಮಗೆ ಮೈಲಿಗೆಯಾಯಿತೆಂತಲೂ, ತಿಳಿಯುತ್ತಾರೆ. ಹಿಂದು ಧರ್ಮಕ್ಕೆ ಇದೊಂದು ಕಲಂಕವಾಗಿದೆ. ಯಾವ ಹಿಂದುಗಳು ಅಂತ್ಯಜರನ್ನು ಮುಟ್ಟಿದರೆ ಮೈಲಿಗೆಯಾಯಿತೆಂದು ತಿಳಿಯುತ್ತಾರೆಯೋ ಅವರು ಪಾಪ ಸಂಗ್ರಹವನ್ನು ಮಾಡುತ್ತಿದ್ದಾರೆಂದು ಭಾವಿಸಬೇಕು. ಈ ಅಸ್ಪರ್ಶತೆಯಿಂದ ಅನೇಕ ಭಯಂಕರ ಅನರ್ಥಗಳುಂಟಾಗಿವೆ ಈ ಪಾಪದಿಂದ ಮುಕ್ತರಾಗುವುದಕ್ಕೋಸ್ಕರ ಅಂತ್ಯಜರನ್ನು ಮುಟ್ಟಿದರೆ ಮೈಲಿಗೆಯಾಯಿತೆಂದು ತಿಳಿಯಬಾರದು.

ಸತ್ಯಾಗ್ರಹಧರ್ಮದ ಈ ಒಂಬತ್ತು ನಿಯಮಗಳು ವಾಚಕರ ಮುಖೋದ್ಗತವಾಗುವುದಕ್ಕೋಸ್ಕರ ಅವುಗಳನ್ನೇ ಈ ಕೆಳಗಣ ಒಂದು ವೃತ್ತದಲ್ಲಿ ಅಡಕ ಮಾಡಿದೆ.

ಶ್ರೀ ಮತ್ಸತ್ಯಮಹಿಂಸೆ ಪಾವನಕಲಾ ಸದ್ಬ್ರಹ್ಮಚರ್ಯಾಪಥಂ ।
ನೇಮಂಬೊರ್ದಿದಸೌಮ್ಯಸಾರ ಸಹಿತಾಹಾರಂಸದಾಸ್ತೇಯಕಂ ॥
ಧಾಮಂಚಿತ್ತಪರಿಗ್ರಹಂ ಹೃತಭಯಂಸ್ಪರ್ಶಂ ಸ್ವದೇಶಿವ್ರತಂ ।
ಧೀಮತ್ಸೇವ್ಯ ಮಹಾತ್ಮ ಗಾಂಧಿ ನವತತ್ವಂಗಳ್ ವಲಂಧಾತ್ರಿಯೋಳ್ ॥



# ಸತ್ಯಾಗ್ರಹ ಧರ್ಮದ

## ಮಹತ್ವ.

ಈ ಮುಂಚೆ ವಿವರಿಸಿರುವ ಸತ್ಯಾಗ್ರಹ ಧರ್ಮದ ನಿಯಮಗಳನ್ನನುಸರಿಸುವ ವ್ಯಕ್ತಿಯಾಗಲಿ, ಅಥವಾ ಸಮಾಜವಾಗಲಿ, ಇಲ್ಲನೆ ದೇಶವಾಗಲಿ ಶ್ರೇಷ್ಠತರವಾದ ನೈತಿಕ ಸಾಮರ್ಥ್ಯವನ್ನು, ಅದ್ವಿತೀಯವಾದ ಆತ್ಮಬಲವನ್ನು, ದೃಢತರವಾದ ಆರೋಗ್ಯಭಾಗ್ಯವನ್ನು, ವ್ಯತ್ಯಾಸವಾಗದ ಸಂಪತ್ತನ್ನು ಮತ್ತು ಪ್ರೇಮಯುಕ್ತವಾದ ಸಾಮಾಜಿಕ ಶಕ್ತಿಯನ್ನು ಹೊಂದುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಈ ಸತ್ಯಾಗ್ರಹಧರ್ಮದ ವಿಷಯದಲ್ಲಿ ಮಹಾತ್ಮರು ತಾ|| ೧೦—೫—೨೦ ನೆಯ ದಿವಸ ಬರೆದಿರುವುದೇನೆಂದರೆ:—

“ ಸರ್ವಧರ್ಮಗಳಲ್ಲಿ ಹಿಂದು ಧರ್ಮವು ಶ್ರೇಷ್ಠವಾದದ್ದಾಗಿದೆ. ಆದರೆ ನಾನು ಯಾವಧರ್ಮದ ವಿಷಯವಾಗಿ ಯೋಚಿಸುತ್ತಿದ್ದೇನೆಯೋ ಅದು ಹಿಂದುಧರ್ಮವಲ್ಲ. ಹಿಂದು ಧರ್ಮಕ್ಕಿಂತಲೂ ಶ್ರೇಷ್ಠವಾದದ್ದಾಗಿದೆ. ಅದು ನಿರಾಯಾಸವಾಗಿ ಮನುಷ್ಯನ ಸ್ವಭಾವವನ್ನೇ ಬೇರೆ ಮಾಡುತ್ತದೆ. ಅಂತಃಕರಣದಲ್ಲಿರುವ ಸತ್ಯ ತತ್ವದಲ್ಲಿ ಮನುಷ್ಯನು ಲೀನವಾಗುವಂತೆ ಮಾಡುತ್ತದೆ. ಮತ್ತು ಮನುಷ್ಯನ ಅಂತರ್ಬಾಹ್ಯ ಶುದ್ಧಿಗಳನ್ನು ಎಂದೂ ಕೆಡಿಸುವುದಿಲ್ಲ. ಇದು ಮನುಷ್ಯ ಸ್ವಭಾವದಲ್ಲಿರುವ ಸನಾತನ ತತ್ವವಾಗಿದೆ. ಈ ತತ್ವಪ್ರಸಾರಣೆಗೋಸ್ಕರ ಏನುಕೊಟ್ಟರೂ ಅದು ಕಡಿಮೆಯೇ ಸರಿ.”

ಪ್ರಪಂಚದ ಎಲ್ಲಾ ಸಾತ್ವಿಕ ಧರ್ಮಗಳ ತತ್ವಗಳನ್ನು ಕುರಿತು ಪ್ರಸ್ತಾಪಿಸಿರುವ ಈ ಕೆಳಗಿನ ವಿವರಣೆಯಿಂದ ಮೇಲಣ ಅಭಿಪ್ರಾಯದ ನಿಜತ್ವವು ವಾಚಕರಿಗೆ ವ್ಯಕ್ತವಾಗಬಹುದು.

## ೧. ಹಿಂದು ಧರ್ಮ.

ಮನುಸ್ಮೃತಿಯಲ್ಲಿ ಧರ್ಮ ಲಕ್ಷಣಗಳು ಈ ಪ್ರಕಾರ ಹೇಳಲ್ಪಟ್ಟಿವೆ.

ಧೃತಿಃಕ್ಷಮಾದಮೋಸ್ತೇಯಂ ಶೌಚಮಿಂದ್ರಿಯ ನಿಗ್ರಹಃ |
ಧೀರ್ವಿದ್ಯಾಸತ್ಯಮಕ್ರೋಧೋದಶಕಂ ಧರ್ಮಲಕ್ಷಣಂ || ಅ. ೬-೯೨.

(೧) ಧೈರ್ಯ (೨) ಕ್ಷಮೆ (೩) ದಯೆ (೪) ಅಸ್ತೇಯ (ಕದಿಯದಿರುವುದು) (೫) ಶುಚಿ (೬) ಇಂದ್ರಿಯ ನಿಗ್ರಹ (೭) ಬುದ್ಧಿ (೮) ವಿದ್ಯೆ (೯) ಸತ್ಯ (೧೦) ಅಕ್ರೋಧ. ಇವು ಧರ್ಮದ ಹತ್ತು ಲಕ್ಷಣಗಳಾಗಿವೆ.

## ೨. ಬೌದ್ಧ ಧರ್ಮ.

ಭಗವಾನ್ ಬುದ್ಧದೇವನು ಈ ಪ್ರಕಾರ ಹತ್ತು ನಿಯಮಗಳನ್ನು ಗೊತ್ತು ಪಡಿಸಿದ್ದಾನೆ.

(೧) ಕೊಲ್ಲಬೇಡ. ಜೀವವನ್ನು ಗೌರವಿಸು (೨) ಕದಿಯಬೇಡ. ಅಪಹರಿಸಬೇಡ. ಪ್ರತಿಯೊಬ್ಬನಿಗೂ ಅವನವನ ಶ್ರಮಕ್ಕೆ ತಕ್ಕ ಪ್ರತಿಫಲವು ಆತನಿಗೆ ದೊರೆಯಲು ಸಹಾಯ ಮಾಡು. (೩) ಶುಚಿಯಾಗಿರು. ಜಿತೇಂದ್ರಿಯನಾಗಿ ಜೀವಿತವನ್ನು ನಡೆಯಿಸು. (೪) ಅಸತ್ಯವನ್ನಾಡಬೇಡ. ಸತ್ಯವಂತನಾಗಿರು. ತಿಳುವಳಿಕೆಯಿಂದಲೂ, ನಿರ್ಭಯದಿಂದಲೂ,

ಪ್ರೇಮದಿಂದಲೂ, ಸತ್ಯವನ್ನೇ ನುಡಿ. (೫) ಸುಳ್ಳು ಸುದ್ದಿಗಳನ್ನು ಹುಟ್ಟಿಸಬೇಡ. ಅಂಥವುಗಳನ್ನು ಆಡಲೂಬೇಡ. ದೂಷಿಸಬೇಡ. (೬) ಆಣೆ ಮಾಡಬೇಡ, ವಿಹಿತವಾಗಿಯೂ, ಗಂಭೀರವಾಗಿಯೂ, ಮಾತನಾಡು. (೭) ಹರಟೆಯಲ್ಲಿ ಕಾಲವನ್ನು ಕಳೆಯಬೇಡ. ಮಿತವಾಗಿ ಮಾತನಾಡು; ಇಲ್ಲದಿದ್ದರೆ ಮೌನದಿಂದಿರು.

(೮) ದುರಾಶೆಗೊಳಗಾಗಬೇಡ. ಅಸೂಯೆ ಪಡಬೇಡ. ಪರರ ಅಭಿವೃದ್ಧಿಯನ್ನು ನೋಡಿ ಸಂತೋಷಿಸು (೯) ಅಸೂಯೆಯನ್ನು ತೆಗೆದುಹಾಕಿ ನಿನ್ನ ಹೃದಯವನ್ನು ಶುದ್ಧಗೊಳಿಸು. ನಿನ್ನ ಶತ್ರುಗಳಲ್ಲಿ ಕೂಡಾ ದ್ವೇಷವನ್ನು ಬೆಳೆಯಿಸಬೇಡ. ಸರ್ವಪ್ರಾಣಿಗಳನ್ನು ಪ್ರೇಮದಿಂದ ಆಲಂಗಿಸು. (೧೦) ಅಜ್ಞಾನದಿಂದ ದೂರನಾಗು. ಸತ್ಯವನ್ನೇ ತಿಳಿಯಲು ಆತುರಪಡು. ಸಂಶಯಕ್ಕೂ ದೋಷಕ್ಕೂ, ಗುರಿಯಾಗಬೇಡ. ಸಂಶಯವು ಉಪೇಕ್ಷೆಯನ್ನೂ, ದೋಷವು ತಪ್ಪುದಾರಿಯನ್ನೂ, ಉಂಟುಮಾಡುತ್ತವೆ. ಅವುಗಳಿಂದ ಶಾಶ್ವತವಾದ ಜೀವಿತದಕಡೆಗೆ ಹೋಗುವ ಶ್ರೇಷ್ಠವಾದ ಮಾರ್ಗವು ನಿನಗೆ ದೊರೆಯಲಾರದು.

## ೩. ಕ್ರೈಸ್ತ ಧರ್ಮ.

### ಸಾಧುವರ್ಯ ಯೇಸು ಕ್ರಿಸ್ತನ ಹತ್ತು ಆಜ್ಞೆಗಳು.

(೧) ಯೆಹೋವನೇ ನಿಮ್ಮ ದೇವರು. ಆತನ ವಿನಾ ಬೇರೆ ದೇವರುಗಳಿಲ್ಲ. (೨) ಯಾವ ವಿಧವಾದ ಮೂರ್ತಿಯನ್ನೂ ಪೂಜಿಸಬಾರದು. (೩) ಅಯೋಗ್ಯವಾದ ಕಾರ್ಯ

ಕ್ಕೆ ದೇವರ ಹೆಸರನ್ನು ತೆಗೆದುಕೊಳ್ಳಬಾರದು. (೪) ಸಬ್ಬ ತದಿನವನ್ನು ದೇವರ ದಿನವೆಂದು ಜ್ಞಾಪಕಮಾಡಿಕೊಳ್ಳಬೇಕು (೫) ತಂದೆ ತಾಯಿಗಳನ್ನು ಸನ್ಮಾನಿಸಬೇಕು. (೬) ನರಹತ್ಯ ಮಾಡಬಾರದು. (೭) ವ್ಯಭಿಚಾರ ಮಾಡಬಾರದು (೮) ಕಳ್ಳ ತನ ಮಾಡಬಾರದು. (೯) ಸುಳ್ಳಾಡಬಾರದು. (೧೦) ಪರರ ಯಾವ ಸೊತ್ತನ್ನೂ ಅಪೇಕ್ಷಿಸಬಾರದು.

೪. ಜೈನಧರ್ಮ.

ಮೋಕ್ಷ ಪ್ರಾಪ್ತಿಗೆ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಮತ್ತು ಸಮ್ಯಕ್ ಚರಿತ್ರ ಎಂಬಿವೇ ಮುಖ್ಯ ಸಾಧನಗಳೆಂದು ಜೈನ ಧರ್ಮದಲ್ಲಿ ಹೇಳಿದೆ. ಮಹಾತ್ಮನಾದ ಅರ್ಹತನು ಜೈನಪ್ರವರ ಸಾರೋದ್ಧಾರ ಎಂಬ ಗ್ರಂಥದಲ್ಲಿ ಸಮ್ಯಕ್ ಚರಿತ್ರವನ್ನು ಕುರಿತು ಹೇಳಿರುವುದೇನೆಂದರೆ:—

ಅಹಿಂಸಾಸೂನೃತಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾಃ ||

(೧) ಅಹಿಂಸೆ (೨) ಸತ್ಯ (೩) ಅಸ್ತೇಯ (೪) ಬ್ರಹ್ಮ ಚರ್ಯ (೫) ಅಪರಿಗ್ರಹ.

೫. ಸ್ಟೋಯಿಕ್ ಧರ್ಮ.

ಕ್ರಿ. ಶ. ಪೂರ್ವ ೩ ನೆಯ ಶತಮಾನದಲ್ಲಿ ಝಿನೊ ಎಂಬ ಒಬ್ಬ ಮಹಾ ತತ್ವಜ್ಞಾನಿಯು ಗ್ರೀಸದೇಶದಲ್ಲಿ ಅಧ್ಯ ಯನ ಮಾಡಿ ಸ್ಟೋಆ ಎಂಬ ಸ್ಥಳದಲ್ಲಿ ತನ್ನ ತತ್ವಗಳನ್ನು ಬೋಧಿಸಿದನು. ಈ ಧರ್ಮಕ್ಕೆ ಸ್ಟೋಯಿಕ್ ಧರ್ಮವೆಂದು ಹೇಳುತ್ತಾರೆ. ಇದರ ಮುಖ್ಯ ತತ್ವಗಳು.

(೧) ಸತ್ಯವನ್ನೇ ಅನುಸರಿಸು (೨) ಧೈರ್ಯದಿಂದಲೇ ವರ್ತಿಸು. (೩) ಸಕಲರೂ ಸಮಾನರೆಂದು ತಿಳಿದು ಎಲ್ಲರ ಸಂಗಡ ಪ್ರೇಮದಿಂದ ವರ್ತಿಸು. (೪) ಪಾಪಿಗಳ ವಿಷಯ ದಲ್ಲಿ ಕ್ಷಮಾಶೀಲನಾಗು. (೫) ಯಾವ ಕಾಲದಲ್ಲಿಯೂ ಸ್ವಾರ್ಥಬುದ್ಧಿಯನ್ನಿಡಬೇಡ. (೬) ಈ ವಿಶ್ವವೇ ಕುಟುಂಬ ವೆಂದು ತಿಳಿದು ದೇಶಾಭಿಮಾನ ಮತ್ತು ಜಾತ್ಯಾಭಿಮಾನಗ ಳಿಗೆ ವಶನಾಗಬೇಡ.

ಈ ಮೇಲಣ ವಿವರಣೆಯಿಂದ ಸತ್ಯಾಗ್ರಹ ಧರ್ಮವು ನೂತನವಾದುದೇನೂ ಅಲ್ಲವೆಂತಲೂ, ಇದು ಸನಾತನ ಧರ್ಮ ವಾಗಿಯೇ ಇದೆಯೆಂತಲೂ, ವಾಚಕರಿಗೆ ವೇದ್ಯವಾಗದಿರಲಾ ರದು. ಧರ್ಮ ತತ್ವಗಳು ನೂತನವಾದವುಗಳಿರುವುದೇ ಇಲ್ಲ. ಅವು ಸನಾತನವಾಗಿಯೇ ಇರುತ್ತವೆ. ಆದರೆ ಯಾ ವಾಗ ಅವು ಜನಗಳ ಆಚರಣೆಯಲ್ಲಿಲ್ಲದಂತಾಗುತ್ತವೆಯೋ ಆಗ ಧರ್ಮಗ್ಲಾನಿಯಾಯಿತೆಂದು ತಿಳಿಯುತ್ತಾರೆ. ಅಂಥ ಸಮಯದಲ್ಲಿ ಆ ಸನಾತನ ತತ್ವಗಳನ್ನೇ ಲೋಕೋದ್ಧಾರಕರು ಜನಾಂಗದಲ್ಲಿ ಪ್ರಸಾರಗೊಳಿಸಲು ತಮ್ಮ ನುಡಿಯಿಂದಲೂ, ನಡೆಯಿಂದಲೂ, ಪ್ರಯತ್ನಿಸುತ್ತಾರೆ.

ಈ ಧರ್ಮೋದ್ಧಾರದ ಪ್ರಯತ್ನವು ಕೆಲವರಿಗೆ ನಿರರ್ಥ ಕವಾದುದಾಗಿ ತೋರಬಹುದು. ಏಕೆಂದರೆ, ಸತ್ಯ, ಅಹಿಂಸಾ ದಿತತ್ವಗಳನ್ನು ಈವರೆಗೂ ಅಸಂಖ್ಯ ಜನಗಳು ಬೋಧಿಸುತ್ತಾ ಬಂದಿದ್ದಾರೆ. ಆದರೂ ಜನಗಳು ಅವುಗಳನ್ನೇನಾದರೂ ಆಚ ರಿಸಿದ್ದಾರೆಯೇ ? ಸತ್ಯ, ಅಹಿಂಸೆ, ಬ್ರಹ್ಮಚರ್ಯಾದಿ ವ್ರತಗ

ಳನ್ನು ಪ್ರಪಂಚದಲ್ಲಿರತಕ್ಕ ಸಕಲಜನಗಳೂ ಹಿಂದಕ್ಕೆ ಎಂದೂ ಆಚರಿಸಿಲ್ಲ. ಮುಂದೆ ಎಂದೂ ಆಚರಿಸುವುದಿಲ್ಲ. ಅಸತ್ಯ ಹಿಂಸಾದಿ ಅಧರ್ಮಗಳು ಯಾವಾಗಲೂ ಇದ್ದೇ ಇರುತ್ತವೆ. ಆದರೆ ಇವು ಜನಾಂಗದಲ್ಲಿ ಮಿತಿಮೀರಿ ಹೆಚ್ಚಿದಾಗ ಸಮಾಜವು ಘೋರವಿಪತ್ತಿಗೀಡಾಗುತ್ತದೆ. ಅಂಥ ಸಮಯದಲ್ಲಿ ಲೋಕೋದ್ಧಾರಕರಿಂದ ಆ ಮಿತಿಮೀರಿದ ಅಧರ್ಮವು ಅಳಿದು ಹೋಗಿ ಜನಾಂಗದಲ್ಲಿ ಸ್ಥಿರತೆಯುಂಟಾಗುತ್ತದೆ. ಧರ್ಮೋದ್ಧಾರದಿಂದ ಅದೇ ಪ್ರಪಂಚಕ್ಕುಂಟಾದ ಫಲಿತಾಂಶವು.

ಮಹಾತ್ಮರ ಈ ಸತ್ಯಾಗ್ರಹ ಧರ್ಮದಲ್ಲಿ ನೂತನ ತತ್ವಗಳಿರದಿದ್ದರೂ ಆ ಪ್ರತಿಯೊಂದು ತತ್ವದ ವ್ಯಾಪಕತೆಯು ಮಾತ್ರ ವಿಶೇಷವಾಗಿದೆ. ಆಯಾಯ ನಿಯಮಗಳನ್ನು ಪ್ರತ್ಯೇಕವಾಗಿ ವಿವರಿಸುವಾಗ ಈ ಸಂಬಂಧವಾಗಿ ಹೆಚ್ಚು ಸ್ಪಷ್ಟೀಕರಿಸಬೇಕೆಂದು ಯೋಚಿಸಿದ್ದೇನೆ. ಮುಖ್ಯವಾಗಿ, **ಮಹಾತ್ಮನಾದ ಮೋಶೆಯ**ಕಟ್ಟಳೆಗಳನ್ನೇ **ಸಾಧುವರ್ಯ ಕ್ರಿಸ್ತನು** ಹೇಗೆ ವಿಸ್ತಾರಗೊಳಿಸಿ ಅವು ಶ್ರೇಷ್ಠತರವಾದವುಗಳಾಗುವಂತೆ ಮಾಡಿದನೋ ಹಾಗೆಯೇ **ಮಹಾತ್ಮಗಾಂಧಿಯವರು** ಸತ್ಯ, ಅಹಿಂಸಾದಿ ಎಲ್ಲಾ ನಿಯಮಗಳನ್ನು ಮತ್ತಷ್ಟು ವ್ಯಾಪಕಗೊಳಿಸಿ ಈ ಸತ್ಯಾಗ್ರಹ ಧರ್ಮದಲ್ಲಿ ಸೇರಿಸಿದ್ದಾರೆ.

ಸ್ವದೇಶಿನಿಯಮವು ಮಾತ್ರ ಹೊಸದೆಂತಲು ಮತ್ತು ಇದು ಹಿಂದಣ ಯಾವ ಧರ್ಮಕಟ್ಟಳೆಗಳಲ್ಲಿಯು ಇಲ್ಲವೆಂತಲು ಕೆಲವರು ಯೋಚಿಸಬಹುದು. ಇದು ಹಿಂದಣ ಧರ್ಮಗಳಲ್ಲಿ ಪ್ರತ್ಯೇಕವಾಗಿ ಹೇಳಲ್ಪಟ್ಟಿಲ್ಲವಾದರೂ ಇದರಲ್ಲಿರುವ

ಅಹಿಂಸೆ ಮೊದಲಾದ ತತ್ವಗಳನ್ನು ಹಿಂದಣ ಧರ್ಮಸಂಸ್ಥಾಪ
ಕರೂ ಬೋಧಿಸಿದ್ದಾರೆ. ಬುದ್ಧದೇವರ ಎರಡನೆಯ ಕಟ್ಟಳೆ
ಯಲ್ಲಿ ಈ ಸ್ವದೇಶಿ ತತ್ವವು ಅಡಕವಾಗಿಯೇ ಇದೆ. ಇಷ್ಟೇ
ಅಲ್ಲ; ವೀರಶೈವ ಮತದ ೬೪ ಶೀಲಗಳೊಳಗಿನ ೨೧ ನೆಯ
ಶೀಲದಲ್ಲಿ ಈ ಸ್ವದೇಶಿ ವ್ರತವು ಎಷ್ಟೋ ಸ್ಪಷ್ಟವಾಗಿಯೇ
ಹೇಳಲ್ಪಟ್ಟದೆ. ಹೇಗೆಂದರೆ " **ನೂತನೂಲಿನಿಂದೆ ಕೊಂಬಿನ
ಲಾಳಿಯುಂಮುಟ್ಟಸದೆ ಲಿಂಗವಂತರಿಂದೆ ರುಚಿತರವಾದ ಪೊ
ದಕೆಯುಂನೇಯಿಸಿ ಕೊಳ್ಪುದೆ ನಿರಂತರದೊಳಿರ್ಪತ್ತೊಂದ
ನೆಯಶೀಲ."** ಸೋಮೇಶ್ವರ ಪುರಾಣ ೨ ನೆಯ ಸಂಧಿ.

ಈಗ ಯಾಂತ್ರಿಕ ಕಾರ್ಯವು ಪ್ರಾರಂಭವಾಗಿ ಜನಾಂ
ಗದಲ್ಲಿ ಭಯಂಕರವಾದ ಸಾಂಪತ್ತಿಕ ಸ್ಥಿತ್ಯಂತರವನ್ನುಂಟು
ಮಾಡಿರುವುದರಿಂದಲೂ, ಪ್ರಪಂಚದಲ್ಲುಂಟಾಗಿರುವ ನಾನಾ
ದುಃಖಗಳಿಗೆ ಇದೊಂದು ಮುಖ್ಯಕಾರಣವಾಗಿರುವುದರಿಂದಲೂ
ಮಹಾತ್ಮರು ಈ ಸ್ವದೇಶಿ ನಿಯಮವನ್ನು ಸತ್ಯಾಗ್ರಹ ಧರ್ಮ
ದಲ್ಲಿ ಸೇರಿಸಿದ್ದಾರೆ. ಪ್ರಾಚೀನಕಾಲದಲ್ಲಿ ಇಂತಹ ಸ್ಥಿತಿಯಿ
ರಲಿಲ್ಲ. ಆದುದರಿಂದ ಆಗಿನ ಧರ್ಮಸ್ಥಾಪಕರು ಈ ನಿಯಮ
ವನ್ನು ಈಪ್ರಕಾರ ಸ್ಪಷ್ಟೀಕರಿಸಲಿಲ್ಲ. ಕಾಲಸ್ಥಿತಿಗೆ ಯೋ
ಗ್ಯವಾದ ಕಟ್ಟಳೆಯನ್ನೇರ್ಪಡಿಸುವುದೇ ಧರ್ಮಸ್ಥಾಪಕರ
ಕರ್ತವ್ಯವು.

ಸ್ಪರ್ಶತೆಯ ಕಟ್ಟಳೆಯು ಹಿಂದುಸ್ಥಾನದಲ್ಲಿ ಹಿಂದು
ಧರ್ಮಕ್ಕೆ ಮಾತ್ರ ಸಂಬಂಧಪಟ್ಟದ್ದಾಗಿರುವುದರಿಂದ ಈ ಸ
ತ್ಯಾಗ್ರಹ ಧರ್ಮದ ಎಲ್ಲಾ ನಿಯಮಗಳು ಎಲ್ಲಾ ದೇಶದವ

ರಿಗು ಮತ್ತು ಎಲ್ಲಾ ಧರ್ಮದವರಿಗು ಅನ್ವಯಿಸತಕ್ಕವುಗಳಲ್ಲ ವೆಂದು ಕೆಲವರು ಭಾವಿಸಬಹುದು. ಇದಾದರೂ ಯುಕ್ತ ವಲ್ಲ. ಕೆಲವು ಹಿಂದುಗಳು ಅಂತ್ಯಜರನ್ನು ಮುಟ್ಟಬಾರದೆಂದು ಏಕೆ ಹೇಳುತ್ತಿದ್ದಾರೆ? ಅವರು ತಮಗಿಂತಲೂ ಕೀಳರೆಂದು ತಿಳಿದುಕೊಂಡಿರುವುದರಿಂದಲ್ಲವೇ? ಸಮಾಜದಲ್ಲಿ ಸಮಾನ ಸ್ಥಿತಿಯನ್ನು ಹೊಂದಲು ಕೆಲವರು ಅನರ್ಹರೆಂಬ ತಿಳುವಳಿ ಕೆಯು ಈಗ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಯಾವು ದಾದರೊಂದು ರೀತಿಯಿಂದ ಇದ್ದೇಯಿದೆ.

ಹಿಂದುಗಳು ಧಾರ್ಮಿಕದೃಷ್ಟಿಯಿಂದ ಅಂತ್ಯಜರು ಕೀಳ ರೆಂದು ಭಾವಿಸಿ ಹೇಗೆ ಅವರನ್ನು ನಾನಾರೀತಿಗಳಿಂದ ಹಿಂಸೆ ಪಡಿಸುತ್ತಿದ್ದಾರೆಯೋ ಹಾಗೆಯೇ ಸ್ವತಂತ್ರ ದೇಶದವರು ಪರತಂತ್ರದಲ್ಲಿರುವವರನ್ನು ರಾಜಕೀಯ ದೃಷ್ಟಿಯಿಂದ ಬಹು ಕೀಳಾಗಿಭಾವಿಸಿ ಕಷ್ಟಪಡಿಸುತ್ತಿದ್ದಾರೆ. ಪಾರತಂತ್ರ್ಯದಲ್ಲಿರು ವವರನ್ನು ಅಂತ್ಯಜರಿಗಿಂತಲೂ ಕಡೆಯಾಗಿ ಕಾಣುತ್ತಿದ್ದಾರೆ. ಸ್ಪರ್ಶತೆಯನಿಯಮವು ಮನುಷ್ಯರೆಲ್ಲರೂ ಸಮಾಜದಲ್ಲಿಸಮಾನ ಸ್ಥಿತಿಯನ್ನು ಹೊಂದಲು ಯೋಗ್ಯರೆಂಬುದನ್ನೇ ಸಿದ್ಧಗೊ ಳಿಸತಕ್ಕದ್ದಾಗಿದೆ. ಆದುದರಿಂದ ಈ ನಿಯಮವು ಪ್ರಪಂಚದ ಸಕಲ ಭಾಗಗಳಿಗೂ ಅನ್ವಯಿಸತಕ್ಕದ್ದಾಗಿಯೇ ಇದೆ.

ಈ ಪ್ರಕಾರ ಸನಾತನವಾಗಿಯೂ, ಸುಖಶಾಂತಿಗಳಿಗೆ ಸಾಧನವಾಗಿಯೂ, ಮತ್ತು ವಿಶ್ವವನ್ನೇ ವ್ಯಾಪಿಸಲು ಯೋಗ್ಯ ವಾದದ್ದಾಗಿಯೂ, ಇರುವ ಈ ಸತ್ಯಾಗ್ರಹ ಧರ್ಮವನ್ನು ಸಕಲರೂ ಅನುಸರಿಸಿ ಸುಖಿಗಳಾಗಲಿ.

## ಸಕಲರೂ ಅವಶ್ಯಕವಾಗಿ ಓದಬೇಕಾದ

## ಹೊಸ ಪುಸ್ತಕಗಳು.



| | |
|---|---|
| ಭಾರತೀಯರ ದೇಶಭಕ್ತಿ | ೧-೦-೦ |
| ಮಹಾತ್ಮ ಗಾಂಧಿಯವರ ಸಚಿತ್ರ ಚರಿತ್ರೆ | ೦-೮-೦ |
| ರಾ.ಬ. ವಾರದ ಮಲ್ಲಪ್ಪನವರ ಸಚಿತ್ರ ಚರಿತ್ರೆ | ೦-೧೨-೦ |
| ಸ್ವಕರ್ತವ್ಯ ಸಿದ್ಧಾಂತ ಭಾಗ ೧-೨ | ೦-೮-೦ |
| ಬುದ್ಧಿಯ ಮಾತು | ೦-೪-೦ |
| ವೀರಶೈವ ಸಮಾಜ ಸುಧಾರಣೆ | ೦-೬-೦ |
| ಆಧುನಿಕ ಜರ್ಮನಿ | ೦-೪-೦ |
| ಪತಿತೋದ್ಧಾರ | ೦-೪-೦ |

ಅಂಚೆಯ ವೆಚ್ಚ ಬೇರೆ.

ವಿಳಾಸ:—

ಎಂ. ಎಂ. ಹರ್ಡೇಕರ್,

ದಾವಣಗೆರೆ.

॥ ಓಂ ॥

ಶ್ರೀ ಸ್ವಾಮಿ ರಾಮತೀರ್ಥರವರ

# ಉಪನ್ಯಾಸಗಳು

ಪ್ರತಿಯೊಂದು ಭಾಗಕ್ಕೂ ಚಂದಾದಾರರಿಗೆ ೮ ಆಣೆ. ಅನ್ಯರಿಗೆ

ಭಾಗ ೧— ಶ್ರೀ ಸ್ವಾಮಿಗಳವರ ಪೂ ಭಾವಚಿತ್ರವು, ಅವರ ಅದ್ಭುತವಾದ ಜೀವನ ಮತ್ತು ಸುಖದ ವಾಸಸ್ಥಾನ, ಕಾರ್ಯಸಿದ್ಧಿಯು ಎಂಬೆರಡು ಅದ್ವಿತೀಯವಾದ ಉಪನ್ಯಾಸಗಳು ದಲ್ಲಿವೆ.

ಭಾಗ ೨— ಶ್ರೀ ಸ್ವಾಮಿಗಳವರು ಸ ವನ್ನು ವಹಿಸಿದನಂತರದ ಭಾವಚಿತ್ರವು ಮತ್ತು ರಾಷ್ಟ್ರೀಯಧರ್ಮ, ಭರತಖಂಡದ ಪರವಾಗಿ ನಿಜ್ಞಾಪನೆ, ಎಂಬ ಬಹು ಪ್ರಾಮುಖ್ಯವಾದ ಉ ನ್ಯಾಸಗಳು ಈ ಭಾಗದಲ್ಲಿವೆ.

ಭಾಗ ೩— ಶ್ರೀ ಸ್ವಾಮಿಗಳವರು ಅನೇ ಉಪನ್ಯಾಸ ಮಾಡುತ್ತಿರುವಾಗಿನ ಭಾವಚಿತ್ರವು ಭರತಖಂಡದ ಭವಿತವ್ಯ, ಭರತಖಂಡದ ಮು ಮಸ್ಯ, ಯಜ್ಞರಹಸ್ಯ, ಎಂಬ ಮೂರು ಉಪನ್ಯಾಸ ಭಾಗದಲ್ಲಿವೆ.

ಎಂ. ಎಂ. ಹರ್ಡೀಕರ್.
ದಾವಣಗೆರೆ.

